ದಾಸವರೇಣ್ಯ ಶ್ರೀ ಜಗನ್ನಾಥದಾಸ

ವಿರಚಿತ

# ಶ್ರೀ ಹರಿಕಥಾಮೃತಸಾರ

(ಮೊದಲಿನ ನಾಲ್ಕು ಸಂಧಿಗಳು)

ಒಂದು ಅಧ್ಯಯನ



ಸಂಗ್ರಹ ಮತ್ತು ಅನುವಾದ - ವಿದ್ವಾನ್ ಶ್ರೀ ಕೆ. ಹಯವದನ ಪುರಾಣಿಕ ಎಂ.ಎ.

ಪ್ರಕಾಶಕರು

# ಮುಹೂರ್ತಸನ್ಮಾರ್ಗದರ್ಶಿನಿ

## ಪ್ರಶ್ನಸಂಗ್ರಹ ಪೂರ್ವಾರ್ಧದ ಪರಿಶಿಷ್ಟಾಧ್ಯಾಯದೊಂದಿಗೆ
## ಭಾವಬೋಧಿನೀವ್ಯಾಖ್ಯಾನಸಮೇತ

ಸಂಪಾದಕರು
ಕೆ. ವಿ. ಗೋಪಾಲ ಭಟ್ ಜ್ಯೋತಿಷಿ
ಕಲ್ಯ, ಕಾಪು

ವ್ಯಾಖ್ಯಾನಕಾರ
ಕೆ. ಜಿ. ಅಶೋಕ, B Sc.

ಪರಿಶೋಧಕರು
ಜ್ಯೋತಿಷ ವಿದ್ವಾನ್ ಬ್ರಹ್ಮಶ್ರೀ ರಾಜಗೋಪಾಲ ಬಲ್ಲಾಳ
ಪುರೋಹಿತ ಪ್ರಾಧ್ಯಾಪಕ ವೇ। ಮೂ। ಚಿತ್ರಾಪುರ ಗೋಪಾಲಕೃಷ್ಣಾಚಾರ್ಯ

ಪ್ರಕಾಶಕರು
ಶ್ರೀ ಪರ್ಯಾಯ ಪೇಜಾವರ ಅಧೋಕ್ಷಜಮಠ, ಉಡುಪಿ
ಹಾಗೂ
ಶಿವಳ್ಳಿ ಬ್ರಾಹ್ಮಣ ಪುರೋಹಿತ ಸಂಘ, ಉಡುಪಿ

*Muhuurta Sanmaargadarśini* - with an appendix of *'praśna-sangraha puurvaardham*

Edited by K V. Gopala Bhat, Astrologer, Jyotirmandiram, Kalya, PO Kaup-574 106 Commentator: K G Ashoka, B Sc , Kaup

Published by- Sri Paryaya Pejavara Mutt, Udupi and,
Shivalli Brahmana Purohita Sangha, Udupi

Year of Publication 2001

Pages X IV + 102

Price · **Rs. 65/-**

ಮುಖಪುಟ ವಿನ್ಯಾಸಕಾರ : ಕೆ. ಎಂ. ಶೇಷಗಿರಿ, ಬೆಂಗಳೂರು.

ಕಂಪ್ಯೂಟರ್ ಅಕ್ಷರಸಂಯೋಜನೆ : 'ನವದುರ್ಗಾ ಲೇಸರ್‌ಟೆಕ್',
C/o. Dr. K Padmanabha Kekunnaya, Udupi-2 [Ph. 31159]
ಮುದ್ರಣ : ಲಾವಣ್ಯ ಮುದ್ರಣಾಲಯ., ಬೆಂಗಳೂರು.

ಮುಖಪುಟದ ವಿವರಣೆ ....

## 'ಪ್ರಭಾಽಸ್ಮಿ ಶಶಿಸೂರ್ಯಯೋಃ'

'ಪ್ರಭಾಽಸ್ಮಿ ಶಶಿಸೂರ್ಯಯೋಃ' ಚಂದ್ರಸೂರ್ಯರ ಪ್ರಭೆ ನನಗಧೀನವಾದದ್ದೆಂದು ಸಾರುತ್ತಿರುವ ಗೀತಾಚಾರ್ಯ ಶ್ರೀಕೃಷ್ಣನ ಸಂದೇಶದಂತೆ ಸೂರ್ಯಾದಿಗ್ರಹಗಳ ಪ್ರಭೆಯನ್ನು ಅವಲಂಬಿಸಿ ಸುತ್ತುತ್ತಿರುವ ಕಾಲಚಕ್ರನಿಯಾಮಕನೂ ಶ್ರೀಕೃಷ್ಣನೇ. ಅಂತಹ ಶ್ರೀಕೃಷ್ಣನ ಕಾಲಚಕ್ರ ನಿಯಾಮಕತ್ವ ಮಹಿಮೆಯನ್ನು ಸಾರುತ್ತಿರುವ ಸೂರ್ಯ ಮಂಡಲಮಧ್ಯಗ ಉಡುಪಿ ಶ್ರೀಕೃಷ್ಣನ ಭಂಗಿ.

# ಪ್ರಕಾಶಕರ ಮಾತು

ಸುಮಾರು ಎರಡೂವರೆ ವರ್ಷಗಳ ಹಿಂದೆ ರೂಪುಗೊಂಡ ಶಿವಳ್ಳಿ ಬ್ರಾಹ್ಮಣ ಪುರೋಹಿತ ಸಂಘವು ತನ್ನ ಎರಡನೇ ವಾರ್ಷಿಕ ಮಹಾಸಭೆಯನ್ನು 22-07-2001ರಂದು ಉಡುಪಿ ಶ್ರೀಕೃಷ್ಣಮಠದ ರಾಜಾಂಗಣ ಸಭಾಭವನದಲ್ಲಿ ನಡೆಸಿತು ಪರ್ಯಾಯಪೀಠದ ಶ್ರೀ ಶ್ರೀ ಶ್ರೀ ವಿಶ್ವೇಶತೀರ್ಥರು ಸಭಾಧ್ಯಕ್ಷರಾಗಿ ಶ್ರೀ ಶ್ರೀ ಶ್ರೀ ವಿಶ್ವಪ್ರಸನ್ನತೀರ್ಥರು ಅನುಗ್ರಾಹಕರಾಗಿ ಉಪಸ್ಥಿತರಿದ್ದ ಆ ಸಮಾರಂಭದಲ್ಲಿ ಶ್ರೀ ಕಲ್ಯ ಗೋಪಾಲ ಭಟ್ಟರು 'ಸಂಸ್ಕಾರಗಳಲ್ಲಿ ಮುಹೂರ್ತಗಳು' –ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡಿದ್ದರು. ಅದರ ಫಲಶ್ರುತಿಯೇ ಈಗ ಪ್ರಕಟಗೊಂಡಿರುವ ಈ 'ಮುಹೂರ್ತಸನ್ಮಾರ್ಗದರ್ಶಿನಿ' ಎಂಬ ಗ್ರಂಥ.

ನಮ್ಮ ಪೌರೋಹಿತ್ಯ ಸಂಘದ ಸರ್ವಾಂಗೀಣ ಪ್ರಗತಿಗೆ ಮುಖ್ಯ ಪ್ರೇರಕರು, ಗುರುಗಳಾದ ಶ್ರೀ ಶ್ರೀ ವಿಶ್ವೇಶತೀರ್ಥರು. ನಮ್ಮ ಪೌರೋಹಿತ್ಯ ಸಂಘವು ಸ್ಥಾಪಿಸಲ್ಪಟ್ಟು ಕೆಲವೇ ಸಮಯದಲ್ಲಿ ಇಂತಹ ಕೃತಿಯನ್ನು ಪ್ರಕಟಿಸುತ್ತಿರುವುದು ಶ್ರೀಗಳ ಅನುಗ್ರಹಬಲದಿಂದಲೇ ಸತ್ಯ. ಈ ಹೊತ್ತಗೆಯ ಪ್ರಕಟನೆಯ ವಿಷಯದಲ್ಲಿ ಸಕಲವಿಧದಿಂದಲೂ ಪ್ರೋತ್ಸಾಹಿಸಿದ್ದಾರೆ. ಅನುಗ್ರಹಸಂದೇಶವನ್ನೂ ನೀಡಿ ಆಶೀರ್ವದಿಸಿದ್ದಾರೆ. ಇವರಿಗೆ ನಮ್ಮ ಸಂಘದ ಪರವಾಗಿ ಸಾಷ್ಟಾಂಗ ಪ್ರಣಾಮ ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

ಅಂದು ಶ್ರೀ ಗೋಪಾಲ ಭಟ್ಟರು ಶಾಸ್ತ್ರೋಕ್ತಕರ್ಮಗಳನ್ನು ಆದಷ್ಟು ಸುಮುಹೂರ್ತದಲ್ಲಿ ನಡೆಸಬೇಕಾದ ಆವಶ್ಯಕತೆಯನ್ನೂ ಮುಹೂರ್ತವನ್ನು ಪರಿಶೀಲಿಸಲು ಅವಲಂಬಿಸಬೇಕಾದ ಆಕರಗಳನ್ನೂ ಈಗ ಮುಹೂರ್ತದ ವಿಷಯದಲ್ಲಿ ತಾಳಲಾಗುವ ಉಪೇಕ್ಷೆಯನ್ನೂ ವಿವರಿಸಿ, ಮುಹೂರ್ತಗಳ ನಿರ್ಧಾರಕ್ಕಾಗಿ ಉತ್ತರ ಭಾರತದಲ್ಲಿ 'ಮುಹೂರ್ತಚಿಂತಾಮಣಿ' ಗ್ರಂಥವಿರುವಂತೆ, ಕೇರಳದಲ್ಲಿ 'ಮುಹೂರ್ತಪದವೀ' ಗ್ರಂಥವಿರುವಂತೆ ಶಿವಳ್ಳಿ ತೌಳವರ ಆಚರಣೆಗಾಗಿ ಒಂದು ಪ್ರತ್ಯೇಕ ಗ್ರಂಥದ ಆವಶ್ಯಕತೆ ಇದೆ ಎಂದು ತಿಳಿಸಿದರು.

ಶ್ರೀ ಗೋಪಾಲ ಭಟ್ಟರ ಈ ಸೂಚನೆ ತುಂಬ ವ್ಯಕ್ತಿಗಳಿಗೆ ಹೌದೆನಿಸಿತು. ವಿಶೇಷವಾಗಿ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು ಈ ಬಗ್ಗೆ 'ಆಚಾರ–ವಿಚಾರ' ಪತ್ರಿಕೆಯಲ್ಲಿ ಲೇಖನ ಬರೆದು, ಆ ಸೂಚನೆ ಕಾರ್ಯಗತವಾಗಲು ಬೇಕಾದ ಸ್ಫೂರ್ತಿ–ಪ್ರೋತ್ಸಾಹಗಳನ್ನು ತುಂಬಿದರು. ನಮ್ಮ ಸಂಘದ ಮಾರ್ಗದರ್ಶಕರಾದ, ನಿರ್ದೇಶಕರಾದ ಪೇಜಾವರಮಠದ ಶ್ರೀಶ್ರೀಶ್ರೀ ವಿಶ್ವಪ್ರಸನ್ನತೀರ್ಥರು ಶ್ರೀ ಗೋಪಾಲ ಭಟ್ಟರಲ್ಲಿ ಇದನ್ನು ತಿಳಿಸಿ, ಪುರೋಹಿತಸಂಘದ ಸದಸ್ಯರಲ್ಲಿ ಈ ಬಗ್ಗೆ ಸಮಾಲೋಚನೆ ನಡೆಸಲು ಆದೇಶಿಸಿದರು. ಅದಕ್ಕನುಗುಣವಾಗಿ 6-10-2001 ರಂದು ನಮ್ಮ ಸಂಘದ ಸದಸ್ಯರ ಸಭೆಯನ್ನು ಕರೆದು ಅದರಲ್ಲಿ ಈ ವಿಚಾರವನ್ನು ಪ್ರಸ್ತಾವಿಸಲಾಯಿತು.

ಅಂದು ಮುಖ್ಯವಾಗಿ ಮೂರು ಪ್ರಶ್ನೆಗಳನ್ನು ಎತ್ತಲಾಗಿತ್ತು:

೧. ರಜಾದಿನದ ಸೌಕರ್ಯ, ಛತ್ರದ ಸೌಲಭ್ಯ –ಇತ್ಯಾದಿಗಳಿಗೇ ಪ್ರಾಶಸ್ತ್ಯ ನೀಡಲಾಗುತ್ತಿರುವ ಇಂದಿನ ದಿನಗಳಲ್ಲಿ ಮುಹೂರ್ತದ ಬಗ್ಗೆ ಹೆಚ್ಚು ಗಮನವನ್ನೇ ಹರಿಸಲಾಗುವುದಿಲ್ಲ ಎಂದಮೇಲೆ ಅಂತಹ ಮುಹೂರ್ತದ ವಿಷಯದಲ್ಲಿ ಗ್ರಂಥದ ಆವಶ್ಯಕತೆ ಏನು?

೨ ಈಗಾಗಲೇ 'ಮುಹೂರ್ತಪದವೀ' ಮುಂತಾದ ಮುಹೂರ್ತಗ್ರಂಥಗಳು ಸಾಕಷ್ಟು ಸಂಖ್ಯೆಯಲ್ಲಿರುವಾಗ ಪ್ರತ್ಯೇಕ ನೂತನ ಮುಹೂರ್ತಗ್ರಂಥ ಬೇಕೇ?

೩. ಮುಹೂರ್ತದ ಬಗ್ಗೆ ಗಮನಹರಿಸುವವರೇ ಕಡಮೆಯಾಗಿರುವಾಗ, ಮುಹೂರ್ತ ಗ್ರಂಥವೊಂದನ್ನು ರಚಿಸಿ ಪ್ರಮಾಣಗಳ ಮೂಲಕ ಉಪನಯನಾದಿ ಸಮಾರಂಭ ಗಳಿಗೆ ಮುಹೂರ್ತಗಳನ್ನೇ ಕಡಮೆಮಾಡಿದಲ್ಲಿ ಒಂದೋ ಉಪನಯನಾದಿ ಸಮಾರಂಭಗಳನ್ನೇ ನಿಲ್ಲಿಸಿಬಿಡುವ ಅಥವಾ ಮುಂದೆಹಾಕುವ ಅಪಾಯ ಸಂಭವಿಸೀತು! ಇಲ್ಲವೇ ಮುಹೂರ್ತದ ಗೊಡವೆಗೇ ಹೋಗದೆ ಅಕಾಲ ದಲ್ಲಿಯೇ ಸಮಾರಂಭಗಳನ್ನು ನಡೆಸಿಬಿಡುವ ಅಪಾಯ ಸಂಭವಿಸೀತು!

ಇವುಗಳನ್ನು ಹೀಗೆ ಸಮಾಧಾನಿಸಲಾಯಿತು:

ದೇವರ ಬಗ್ಗೆ, ಧರ್ಮದ ಬಗ್ಗೆ ನಂಬಿಕೆಯೇ ಕ್ಷೀಣವಾಗುತ್ತಿರುವ ಇಂದಿನ ದಿನಗಳಲ್ಲಿ ಸಮಾರಂಭಗಳನ್ನು ಶಾಸ್ತ್ರೀಯವಾಗಿ ನಡೆಸಬೇಕೆಂಬ ಭಾವನೆ ಸಡಿಲ ವಾಗಿರುವಂತೆ ಸಮಾರಂಭಗಳನ್ನು ಸಕಾಲದಲ್ಲಿ ನಡೆಸಬೇಕೆಂಬ ವಿಚಾರವೂ ಶಿಥಿಲವಾಗುತ್ತಿದೆ. ಆದರೆ ಕೆಲವರ ಅನಿಸಿಕೆ, ಭಾವನೆ, ಪ್ರವೃತ್ತಿ ಹೀಗೆ ಎಂದಾಗಲಿ ಯಾರಿಗೂ ಶ್ರದ್ಧೆಯೇ ಇಲ್ಲ ಎಂದಾಗಲಿ ಯಾರ ಪಾಲಿಗೂ ಸುಮುಹೂರ್ತದ ಪರಿಶೀಲನೆಯೇ ಬೇಡ ಎಂದಾಗಲಿ ತೀರ್ಮಾನಿಸುವುದು ಅನುಚಿತ ಅಶ್ರದ್ಧಾಳುಗಳಲ್ಲಿ ಮುಹೂರ್ತಾದಿಗಳ ಬಗ್ಗೆ ಶ್ರದ್ಧೆ ಮೂಡುವಂತೆ, ಶ್ರದ್ಧಾಳುಗಳಲ್ಲಿಯ ಶ್ರದ್ಧೆ ದೃಢ ವಾಗುವಂತೆ ಅಭಿವೃದ್ಧವಾಗುವಂತೆ ಬೇಕಾದ ವ್ಯವಸ್ಥೆಯನ್ನು ಮಾಡುವುದು ಧಾರ್ಮಿಕರ, ಪುರೋಹಿತರ ಕರ್ತವ್ಯ ಈ ಹಿನ್ನೆಲೆಯಲ್ಲಿ ಮುಹೂರ್ತದ ಬಗ್ಗೆ ಸರಿಯಾದ ಮಾಹಿತಿ ನೀಡುವ ಗ್ರಂಥ ಬೇಕೇ ಬೇಕು

ಈಗಾಗಲೇ 'ಮುಹೂರ್ತಪದವೀ' ಮುಂತಾದ ಗ್ರಂಥಗಳಿರುವುವಾದರೂ ಆಯಾ ಗ್ರಂಥಗಳು ಆಯಾ ಪ್ರದೇಶಕ್ಕೆ ಸಂಬಂಧಿಸಿದಂತೆ ಇರುವುದರಿಂದ ಮಾಧ್ವ ಸಿದ್ಧಾಂತದ ಆಧಾರದಲ್ಲಿ ನಡೆಯುತ್ತಿರುವ ತೌಳವಾಚಾರಗಳಿಗೆ ಸಂಬಂಧಿಸುವಂತೆ ಪ್ರಮಾಣಗಳನ್ನು ಮುಹೂರ್ತದ ಕುರಿತಾದ ಗ್ರಂಥಗಳಿಂದೆಲ್ಲ ಆಯ್ಕೆಮಾಡಿ ಸಂಗ್ರಹಿಸುವ ಸರಳ ಕೃತಿಯ ಆವಶ್ಯಕತೆ ಇದ್ದೇ ಇದೆ

ಮುಹೂರ್ತಗಳನ್ನು ಉತ್ತಮಮಟ್ಟದವು, ಮಧ್ಯಮಮಟ್ಟದವು ಹಾಗೂ ಕನಿಷ್ಠ ಮಟ್ಟದವುಗಳೆಂದು ವಿಭಾಗಿಸಿ ತಿಳಿಸಿದಾಗ ಆದಷ್ಟು ಉತ್ತಮಮಟ್ಟದ ಮುಹೂರ್ತ ಗಳನ್ನು ಆರಿಸಿಕೊಳ್ಳಲು ಯತ್ನಿಸಲಾಗುವುದು ಒಂದೊಮ್ಮೆ ಅನಿವಾರ್ಯವಾಗಿ ಕನಿಷ್ಠಮಟ್ಟದ ಮುಹೂರ್ತವನ್ನೇ ಆಯ್ಕೆಮಾಡಿದರೂ ಆ ಬಗ್ಗೆ ಪಶ್ಚಾತ್ತಾಪಕ್ಕೊಳ ಗಾಗುವುದಕ್ಕಾದರೂ ಅವಕಾಶವಿದೆ

ಆದುದರಿಂದ ತೌಳವಾಚಾರಗಳಿಗೆ ಹೊಂದಿಕೆಯಾಗುವಂತೆ ಮುಹೂರ್ತಗಳ ಬಗ್ಗೆ ಬೆಳಕುಚೆಲ್ಲುವ ಸರಳವಾದ ಒಂದು ಕೃತಿ ಅತ್ಯವಶ್ಯ ಎಂದು ಆ ಸಭೆಯಲ್ಲಿ ನಿರ್ಧರಿಸಲಾಯಿತಲ್ಲದೆ, ಶ್ರೀ ಗೋಪಾಲ ಭಟ್ಟರು ಆ ಗ್ರಂಥವನ್ನು ಸಿದ್ಧಪಡಿಸ ಬೇಕೆಂದೂ ಕೇಳಿಕೊಳ್ಳಲಾಯಿತು.

ಅಲ್ಪ ಅವಧಿಯಲ್ಲಿಯೇ ಶ್ರೀ ಗೋಪಾಲ ಭಟ್ಟರು ಈ 'ಮುಹೂರ್ತ ಸನ್ಮಾರ್ಗದರ್ಶಿನಿ' ಎಂಬ ಕೃತಿಯನ್ನು ಸಿದ್ಧಪಡಿಸಿರುವರು. ಇಲ್ಲಿ ಉಪನಯನ ಸಂಸ್ಕಾರದ ಮುಹೂರ್ತಗಳ ಬಗ್ಗೆ ಹೆಚ್ಚು ಗಮನಹರಿಸಿರುವುದು ಉಲ್ಲೇಖಾರ್ಹ.

ಹೀಗೆ ಶ್ರೀಕೃಷ್ಣ-ಮುಖ್ಯಪ್ರಾಣರ ಅನುಗ್ರಹದಿಂದ ಮೂಡಿಬಂದ ಮುಹೂರ್ತದ ಈ ಕೃತಿಯನ್ನು ಉಪಯೋಗಿಸುವಲ್ಲಿ ಅಷ್ಟಮಠಾಧೀಶರೂ ಅಷ್ಟಮಠಗಳಿಗೆ ಸಂಬಂಧಿಸಿದ ಜ್ಯೋತಿಷ್ಕರೂ ಪುರೋಹಿತರೂ ಆಸಕ್ತಿಯನ್ನು ತೋರಿಸಿದರೆಂದರೆ ಲೇಖಕರಾದ ಶ್ರೀ ಗೋಪಾಲ ಭಟ್ಟರ ಹಾಗೂ ಪ್ರಕಾಶಕರಾದ ಶಿವಳ್ಳಿ ಪುರೋಹಿತ ಸಂಘದವರ ಶ್ರಮ ಸಾರ್ಥಕವಾದೀತು!

ನಮ್ಮ ಸಂಘದ ಮಾರ್ಗದರ್ಶಕರಾಗಿ ಸ್ಫೂರ್ತಿದಾಯಕರಾಗಿ ಅನುಗ್ರಹಿಸು ತ್ತಿರುವ, ಈ ಕೃತಿಯ ರಚನೆಗೂ ವಿಶೇಷವಾಗಿ ಪ್ರೋತ್ಸಾಹವಿತ್ತು ಸಂದೇಶ ನೀಡಿ ಆಶೀರ್ವದಿಸಿರುವ ಪೇಜಾವರ ಮಠದ ಶ್ರೀ ಶ್ರೀ ಶ್ರೀ ವಿಶ್ವಪ್ರಸನ್ನತೀರ್ಥರಿಗೆ ಪ್ರಣಾಮ ಪೂರ್ವಕ ಕೃತಜ್ಞತೆ.

ಈ ಕೃತಿಯನ್ನು ಅಲ್ಪಾವಧಿಯಲ್ಲಿಯೇ ರಚಿಸಿರುವ ಕಲ್ಯ ಶ್ರೀ ಗೋಪಾಲ ಭಟ್ಟರಿಗೆ ಹಾಗೂ ವ್ಯಾಖ್ಯಾನಕಾರರಾದ ಅವರ ಸುಪುತ್ರ ಶ್ರೀ ಕೆ. ಜಿ. ಅಶೋಕ ಇವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಪ್ರಕಾಶನಕಾರ್ಯದಲ್ಲಿ ಉದಾರಹೃದಯದಿಂದ ದೇಣಿಗೆಯನ್ನು ನೀಡಿ ಸಹಕರಿಸಿದ ನಮ್ಮ ಸಂಘದ ಸದಸ್ಯರಾದ ಜ್ಯೋತಿಷಿ ಉಚ್ಚಿಲ ಶ್ರೀ ಕೆ. ವಿ. ರಾಘವೇಂದ್ರ ಉಪಾಧ್ಯಾಯ ಇವರಿಗೆ ಸಂಘವು ಆಭಾರಿಯಾಗಿದೆ. ಮುದ್ರಣಕಾರ್ಯ ದಲ್ಲಿ ವಿಶೇಷವಾಗಿ ಸಹಕಾರವನ್ನು ನೀಡಿದ ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾಂಸರಾದ ಪಿ. ವೆಂಕಟರಮಣ ಉಪಾಧ್ಯಾಯರಿಗೆ ಸಂಘವು ಚಿರಋಣಿಯಾಗಿದೆ.

ಈ ಕೃತಿಯನ್ನು ಚೆನ್ನಾಗಿ ಅಕ್ಷರಸಂಯೋಜಿಸಿಕೊಟ್ಟ 'ನವದುರ್ಗಾ ಲೇಸರ್ ಟೆಕ್'ನವರಿಗೂ ಮುಖಪುಟವಿನ್ಯಾಸ ಮಾಡಿಕೊಟ್ಟ ಶ್ರೀ ಕೆ. ಎಂ. ಶೇಷಗಿರಿ ಇವರಿಗೂ ಅಚ್ಚುಕಟ್ಟಾಗಿ ಸಕಾಲಕ್ಕೆ ಮುದ್ರಿಸಿಕೊಟ್ಟ ಲಾವಣ್ಯ ಮುದ್ರಣಾಲಯದ ಮಾಲಕರಿಗೆ ಹಾಗೂ ಸಿಬ್ಬಂದಿವರ್ಗಕ್ಕೂ ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ.

ಉಡುಪಿ.
ವಿಷು ಸಂವತ್ಸರದ
ಕಾರ್ತಿಕ ಶುದ್ಧ ಪೂರ್ಣಿಮಾ
30-11-2001

**ನಂದಳಿಕೆ ವಿಠಲ ಭಟ್ಟ**
ಅಧ್ಯಕ್ಷರು
ಶಿವಳ್ಳಿ ಬ್ರಾಹ್ಮಣ ಪುರೋಹಿತರ ಸಂಘ

# ಲೇಖಕನ ಮಾತುಗಳು

ಇದೊಂದು ಆರು ಅಧ್ಯಾಯಗಳನ್ನೊಳಗೊಂಡ ಪುಟ್ಟ ಮುಹೂರ್ತಗ್ರಂಥ.

ಮುಹೂರ್ತಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಅನೇಕ ಗ್ರಂಥರತ್ನಗಳಿವೆ ಆ ಗ್ರಂಥಗಳಿಂದ ಕವಲೊಡೆದು ದೇಶಾಚಾರಾನುಸಾರವಾಗಿ ನಿರೂಪಿತವಾದ ಸಂಗ್ರಹಗ್ರಂಥಗಳಿವೆ.

ಮೂಲತಃ ಈ ಶಾಸ್ತ್ರರಚನಾಕಾರರು ವಸಿಷ್ಠ, ನಾರದ, ಬೃಹಸ್ಪತಿ ಮುಂತಾದ 20 ಮಂದಿ ಮಹರ್ಷಿಗಳು. ಈ ಮಹರ್ಷಿಗಳು ಜ್ಯೋತಿಶ್ಶಾಸ್ತ್ರಕಾರರೂ ಹೌದು ಸ್ಮೃತಿ–ಧರ್ಮಶಾಸ್ತ್ರಕಾರರೂ ಹೌದು ಇವರು ವೇದ, ಗೃಹ್ಯಸೂತ್ರ ಹಾಗೂ ಜ್ಯೋತಿಶ್ಶಾಸ್ತ್ರದ ಮೂಲಯುಕ್ತಿಗಳಿಗನುಸಾರವಾಗಿ ತಮ್ಮ ಮಹಾಕೃತಿಗಳನ್ನು ರಚಿಸಿದರು ಇವರ ಮಹಾಕೃತಿಗಳು ಬಹುಭಾಗ ಈಗ ಅಲಭ್ಯವಾಗಿದ್ದು, ಪ್ರಯೋಗ ಗ್ರಂಥಗಳಲ್ಲಿ ಹಾಗೂ ಧರ್ಮಶಾಸ್ತ್ರಗಳ ನಿಬಂಧಗಳಲ್ಲಿನ ಉದ್ಧೃತ ಶ್ಲೋಕಗಳಿಂದ ಇವರ ರಚನೆಗಳ ಬಗ್ಗೆ ನಮಗೆ ಸ್ವಲ್ಪ ಹೊಳಹು ಸಿಗುತ್ತದೆ

ಮುಹೂರ್ತಶಾಸ್ತ್ರವನ್ನು ನಾರದರು ವೇದಾಂಗವೆಂದು ಹೇಳಿದ್ದಾರೆ 'ಅಸ್ಯ ಶಾಸ್ತ್ರಸ್ಯ ಸಂಬಂಧಃ ವೇದಾಂಗಮಿತಿ ಕೀರ್ತಿತಮ್'. ಶ್ರೌತಸ್ಮಾರ್ತ ಲೌಕಿಕ ಕರ್ಮಗಳೆಲ್ಲಾ ಸುಮುಹೂರ್ತದಲ್ಲಿ ಮಾಡಿದರೆ ಮಾತ್ರವೇ ಸಫಲವಾಗುವುದೆಂದೂ ದುರ್ಮುಹೂರ್ತದಲ್ಲಿ ಮಾಡಿದರೆ ನಿಷ್ಫಲ ಅಥವಾ ವಿರುದ್ಧ ಫಲಪ್ರದವೆಂದೂ ತಿಳಿಯಲಾಗಿದೆ. ಹಾಗಾದ್ದರಿಂದ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಮುಹೂರ್ತ ಶಾಸ್ತ್ರಕ್ಕೊಂದು ಪ್ರಧಾನವಾದ ಸ್ಥಾನವಿದೆ.

ಮೊದಲಿನ ಕಾಲದಲ್ಲಿ ಶುಭಕಾರ್ಯಗಳಿಗೆ ಜ್ಯೋತಿಷಿಗಳ ಬಳಿ ಹೋಗಿ ಮುಹೂರ್ತ ಕೇಳಿಕೊಂಡು ಬರುವ ಕ್ರಮವಿತ್ತು ಪ್ರತಿಯೊಂದು ಶುಭಶೋಭನಾದಿಗಳಿಗೆ ಮುಹೂರ್ತಜ್ಞಾನದ ಆವಶ್ಯಕತೆಯಿರುವುದರಿಂದ ಪಂಚಾಂಗಗಳಲ್ಲಿ ಮುಹೂರ್ತಗಳನ್ನು ಬರೆಯುವ ರೂಢಿ ಬಂದಿತು. ಮುಹೂರ್ತಗಳನ್ನು ಪಂಚಾಂಗದಲ್ಲಿ ಹಾಕಿದರೂ, ಕರ್ತೃದೋಷ ಮುಂತಾದ್ದನ್ನು ಸ್ಥಳೀಯ ಜ್ಯೋತಿಷಿಗಳು ಅಥವಾ ಪುರೋಹಿತರುಗಳೇ ನೋಡಬೇಕಾಗುತ್ತದೆ ಶಾಸ್ತ್ರಗ್ರಂಥಗಳಲ್ಲಿ ಕರ್ತೃದೋಷಗಳು, ಅದರ ಅಪವಾದಗಳು, ಅಪವಾದವಿಲ್ಲದಿದ್ದರೆ ಅದಕ್ಕೆ ಪರಿಹಾರಗಳು, ಅಪವಾದ–ಪರಿಹಾರ ಇವೆರಡರಿಂದಲೂ ಅಭೇದ್ಯವಾದ ದೋಷಗಳು ಹಲವಾರು ರೀತಿಯಲ್ಲಿವೆ ಇದರಲ್ಲಿ ಋಷಿಮತಭೇದಗಳು, ದೇಶಾಚಾರಭೇದಗಳು ಹಲವಾರು ವಿಧದಲ್ಲಿದ್ದು, ಕ್ರಮವಾದ ಶಾಸ್ತ್ರಾಧ್ಯಯನವಿಲ್ಲದೆ 'ಇದಮಿತ್ಥಂ' ಎಂದು ನಿರ್ಣಯಿಸುವ ಸಾಧ್ಯತೆ ಬಹಳ ಕಡಮೆಯಾಗಿದೆ ಮುಹೂರ್ತಮಾಧವೀಯ ಮುಂತಾದ ಗ್ರಂಥಗಳು ಹಲವಾರು ಸೂಕ್ಷ್ಮ ಗಣಿತ ವಿಷಯಗಳನ್ನೊಳಗೊಂಡಿರುವುದರಿಂದ ಅದನ್ನು ತಿಳಿದುಕೊಳ್ಳುವುದು ಕಷ್ಟ. ತಿಳಿದುಕೊಂಡು ಅದನ್ನು ಆಚರಿಸೋಣವೆಂದರೆ ವರ್ಷಕ್ಕೆ ಒಂದೋ ಎರಡೋ ಮುಹೂರ್ತ ಮಾತ್ರ ಸಿಗುವ ಅಪಾಯವೂ ಇದೆ. ಇವತ್ತು

ಸಮಾಜಕ್ಕೆ ಮುಹೂರ್ತಗಳು ತುಂಬಾ ಬೇಕಾಗಿವೆ. ಅತ್ಯಂತ ಶುಭಮುಹೂರ್ತಗಳು ನಮ್ಮ ಕೈಗೆ ಎಟುಕದಿರುವ ಸಂಭವವೇ ಹೆಚ್ಚು ಆದ್ದರಿಂದ ಮುಹೂರ್ತಶಾಸ್ತ್ರದ ಮುಖ್ಯ ವಿಷಯಗಳನ್ನು ಬಿಟ್ಟುಕೊಡದೆ, ಕ್ಲಿಷ್ಟವಾದ ಗಣಿತದ ಪ್ರಕ್ರಿಯೆಗಳಿಗೆ ಕೈಹಾಕದೆ, ಇಲ್ಲಿಯ ಸಾಮಾನ್ಯ ಜನರಿಗೆ–ಸಾಮಾಜಿಕರಿಗೆ ಸಹ ತಿಳಿಯುವ ರೀತಿಯಲ್ಲಿ ಸಾಧ್ಯವಿದ್ದಷ್ಟು ಸರಳಗೊಳಿಸಿ ಈ ಸಂಗ್ರಹಕೃತಿಯನ್ನು ರಚಿಸಲಾಗಿದೆ

ಅನಧ್ಯಾಯದಿನಗಳಲ್ಲಿ ಉಪನಯನ ಮಾಡಿದರೆ ಪುನಸ್ಸಂಸ್ಕಾರ ಮಾಡಬೇಕೆಂದು ಧರ್ಮಶಾಸ್ತ್ರಗಳ ವಚನವಿದೆ. 1939ರ ವರೆಗೆ ಉಡುಪಿ ಪಂಚಾಂಗಗಳಲ್ಲಿ ಅನಧ್ಯಾಯ ದಿನಗಳು ಯಾವುದೆಂದು ನಮೂದಿಸಲಾಗುತ್ತಿತ್ತು ಆಗ ಪಂಚಾಂಗಗಳಲ್ಲಿ ಮುಹೂರ್ತಾದಿಗಳನ್ನು ಬರೆಯುವ ವಿಷಯದಲ್ಲಿ ಸಲಹೆ ನೀಡಲು ಧರ್ಮಶಾಸ್ತ್ರಜ್ಞರ ಮಂಡಳಿ ಇರುತ್ತಿತ್ತು 1945ರ ವರೆಗೆ 'ಸಂದಿಗ್ಧಾಂಶನಿರ್ಣಯ'ವೆಂಬ ಶೀರ್ಷಿಕೆಯಡಿಯಲ್ಲಿ ಸಮಾಜಬಂಧುಗಳಿಗೆ ತಿಳಿವಳಿಕೆ ಕೊಡಲಾಗುತ್ತಿತ್ತು

ನಿತ್ಯದೋಷಗಳಿಗೆ ಮುಹೂರ್ತಮಾಧವೀಯದ ಸರಳ ಶ್ಲೋಕಗಳನ್ನೂ ಸಂಸ್ಕಾರಗಳಿಗೆ ಅಚ್ಚುಕಟ್ಟಾಗಿರುವುದರಿಂದ ಮುಹೂರ್ತಪದವಿಯ ಶ್ಲೋಕಗಳನ್ನೂ ಉದ್ಧರಿಸಲಾಗಿದೆ ಇದನ್ನು ಓದಿದ ಒಬ್ಬ ವಿದ್ಯಾರ್ಥಿಗೆ ಇನ್ನೊಂದು ಮುಹೂರ್ತ ಗ್ರಂಥವನ್ನು ನೋಡುವಾಗ ಗೊಂದಲವಾಗಬಾರದೆಂಬ ದೃಷ್ಟಿಯಿಂದ ಸಂಜ್ಞಾಧ್ಯಾಯವನ್ನು ಮೊದಲು ಕೊಟ್ಟಿರುತ್ತೇನೆ. ಶಾಸ್ತ್ರಗ್ರಂಥಗಳಲ್ಲಿ ನಿತ್ಯದೋಷ, ಕರ್ತೃದೋಷ, ಷಡ್ದೋಷ ಹಾಗೂ ವಿಹಿತ ನಿಷಿದ್ಧಗಳನ್ನು ಮಿಶ್ರಗೊಳಿಸಿ ಹೇಳುವ ಕ್ರಮವಿದೆ. ಹಾಗೆ ಹೇಳುವಾಗ ವಿಸ್ತಾರ ಹೆಚ್ಚಾಗುತ್ತದೆ ಗೊಂದಲವುಂಟಾಗುತ್ತದೆ. ಅದಕ್ಕೋಸ್ಕರ, ನಿತ್ಯದೋಷಾಧ್ಯಾಯ, ಬಲಾಬಲವಿವೇಚನಾಧ್ಯಾಯ, ಅಪವಾದಾಧ್ಯಾಯ, ಸಂಸ್ಕಾರಾದಿ ಮುಹೂರ್ತನಿರೂಪಣಾಧ್ಯಾಯ ಎಂದು 5 ಅಧ್ಯಾಯಗಳನ್ನು ಕೊಡಲಾಗಿದೆ. ಸಾಮಾನ್ಯವಾಗಿ ಪಂಚ ಅಂಗಗಳು–ತಿಥಿನಕ್ಷತ್ರ, ಯೋಗವಾರ ಕರಣ –ಇವುಗಳ ಉತ್ತಮ ಮಧ್ಯಮ ವರ್ಜ್ಯತ್ವಗಳನ್ನು ನಿತ್ಯದೋಷಾಧ್ಯಾಯದಲ್ಲಿ ನಿರೂಪಿಸಲಾಗಿದೆ. ವಿಶೇಷವಿದ್ದರೆ ಮಾತ್ರ ಸಂಸ್ಕಾರಾಧ್ಯಾಯದಲ್ಲಿ ಇದರ ಪುನರ್ನಿರೂಪಣೆಯಿದೆ. ಪುನರ್ನಿರೂಪಣೆ ಇಲ್ಲದಿದ್ದರೆ ನಿತ್ಯದೋಷಾಧ್ಯಾಯದ ಗುಣದೋಷಗಳು ಅನ್ವಯಿಸುತ್ತವೆ. ಅನಿವಾರ್ಯಪಕ್ಷದಲ್ಲಿ ಅಪವಾದಗಳಿದ್ದರೆ ದುರ್ಬಲ ದೋಷಗಳೂ ಗ್ರಾಹ್ಯ. ದುರ್ಬಲತೆ ಸಬಲತೆಗಳ ಬಗ್ಗೆ ಬಲಾಬಲ ವಿವೇಚನಾಧ್ಯಾಯದಲ್ಲಿ ನಿರೂಪಣೆ ಇದೆ. ಉಪನಯನಸಂಸ್ಕಾರದ ವಿಧಿಯನ್ನು ವೇದದಲ್ಲಿ ಪ್ರತ್ಯೇಕವಾಗಿ ಹೇಳಿರುವುದರಿಂದ ಈ ಪುಸ್ತಕದಲ್ಲಿಯೂ ಅದರ ಬಗ್ಗೆ ಕೆಲವು ವಿಷಯಗಳನ್ನು ವಿವೇಚಿಸಲಾಗಿದೆ. ಬೇರೆ ಬೇರೆ ಗ್ರಂಥಗಳಿಂದ ಈ ಪುಸ್ತಕಕ್ಕೆ ಶ್ಲೋಕಗಳನ್ನು ಆರಿಸಿರುವುದರಿಂದ ಇದರಲ್ಲಿ ಕೆಲವು ಪುನರುಕ್ತಿಗಳು ಮತ್ತು ಸಮ್ಮಿಶ್ರಣಗಳು ಕಂಡುಬರುತ್ತವೆ ವಿದ್ವಾಂಸರು ಅದನ್ನು ಅನಿವಾರ್ಯವೆಂದು ತಿಳಿಯಬೇಕಾಗಿ ವಿನಂತಿ.

1998ರಲ್ಲಿ ಈ ಲೇಖಕನಿಂದ 'ಪ್ರಶ್ನಸಂಗ್ರಹಃ ಪೂರ್ವಾರ್ಧಮ್' ಎಂಬ ಸಂಗ್ರಹಗ್ರಂಥವು ಪ್ರಕಟವಾಗಿದೆ. ಪರಿಶಿಷ್ಟಾಧ್ಯಾಯವನ್ನು ಅದರಲ್ಲಿ ಸೇರಿಸಲು ಆಗ

ಸಾಧ್ಯವಾಗಲಿಲ್ಲ. ಈ ಪರಿಶಿಷ್ಟಾಧ್ಯಾಯವು ಎಲ್ಲ ಜ್ಯೋತಿಷಿಗಳಿಗೂ ಉಪಯುಕ್ತವೆಂದು ಭಾವಿಸಿದ್ದರಿಂದ ಇದರ ಜೊತೆಯಲ್ಲಿ ಅದರ ಪರಿಶಿಷ್ಟಾಧ್ಯಾಯವನ್ನು ಸೇರಿಸಲಾಗಿದೆ. ಇದುವರೆಗಿನ ನನ್ನ ಗ್ರಂಥಗಳನ್ನು ಸಹೃದಯರು ಆತ್ಮೀಯವಾಗಿ ಸ್ವೀಕರಿಸಿದಂತೆ ಇದನ್ನೂ ಪರಿಗ್ರಹಿಸುವರೆಂದು ಭಾವಿಸುತ್ತೇನೆ.

ಕನ್ನಡದಲ್ಲಿ ಹಲವಾರು ಮುಹೂರ್ತಗ್ರಂಥಗಳು ಮುದ್ರಿತವಾಗಿವೆ. ಇದೇ ವರ್ಷ ನಮ್ಮವರೇ ಆದ ಜ್ಯೋತಿಷರತ್ನಂ ಶ್ರೀ ಕಬಿಯಾಡಿ ಶ್ರೀನಿವಾಸಾಚಾರ್ಯರು ಬೃಹತ್ತಾದ 'ಶ್ರೀಮುಹೂರ್ತಸಂಹಿತಾ' ಎಂಬ ಮಹಾಗ್ರಂಥವನ್ನು ಜಿಜ್ಞಾಸುಗಳ ಹಿತಾರ್ಥ ಪ್ರಕಟಿಸಿರುತ್ತಾರೆ. ವಿಸ್ತಾರವಾದ ವಿವೇಚನೆಗೆ ಅವರ ಗ್ರಂಥ ಅತ್ಯಂತ ಉಪಾದೇಯ.

ಈ ಪುಸ್ತಕವು ಹೊರಬರಲು ಸೂಚನಾರೂಪದ ಆಜ್ಞೆಯನ್ನು ಕೊಟ್ಟ ಪರ್ಯಾಯ ಮಠಾಧೀಶರಾದ ಪರಮಪೂಜ್ಯ ಶ್ರೀಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು ಮುಖ್ಯ ಕಾರಣರು. ಅವರು ಈ ಪುಸ್ತಕದ ಬಗ್ಗೆ ಅನುಗ್ರಹ ಸಂದೇಶವನ್ನು ನೀಡಿ ಹರಸಿದ್ದಾರೆ. ಅವರಿಗೆ ಭಕ್ತಿಪೂರ್ವಕ_ಸ್ತಾಷ್ಟಾಂಗ ಪ್ರಣಾಮ ಗಳನ್ನು ಅರ್ಪಿಸುತ್ತೇನೆ.

ದಿನಾಂಕ 22-7-2001ರ ಪುರೋಹಿತ ಸಂಘದ ಮಹಾಸಭೆಯಲ್ಲಿ ಮುಹೂರ್ತಗಳ ಬಗ್ಗೆ ಕೆಲವು ಸಮಸ್ಯೆಗಳನ್ನು ಸಭೆಯ ಮುಂದಿಟ್ಟ ಕೂಡಲೇ ಅದರ ಸಾರಾಂಶವನ್ನು ಗ್ರಹಿಸಿ ಅದನ್ನು ಕೂಡಲೇ ಸರಿಪಡಿಸಬೇಕೆಂದು ಕಾರ್ಯಪ್ರವೃತ್ತಿಗೆ ಪ್ರೇರೇಪಿಸಿದವರು ಶ್ರೀಶ್ರೀಶ್ರೀ ವಿಶ್ವಪ್ರಸನ್ನತೀರ್ಥಶ್ರೀಪಾದಂಗಳವರು. ಅವರಿಗೆ ಭಕ್ತಿಪೂರ್ವಕ ಪ್ರಣಾಮಗಳು.

ಧಾರ್ಮಿಕವಾದ ಯಾವ ವಿಧಾನವೂ ಶಾಸ್ತ್ರೀಯತೆಯ ಹಳಿ ತಪ್ಪಬಾರದೆಂದು ನಿಜವಾದ ಕಳಕಳಿಯುಳ್ಳ ಸಹೃದಯ ವಿದ್ವಾಂಸರು ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು. ಅವರ ವೈಯಕ್ತಿಕ ಪ್ರಯತ್ನವು ಈ ಪುಸ್ತಕ ಹೊರಬರಲು ಮುಖ್ಯ ಕಾರಣ. ಅವರಿಗೆ ಹಾರ್ದಿಕ ಕೃತಜ್ಞತೆಗಳು.

ಸಹೃದಯ ಜ್ಯೋತಿಷವಿದ್ವಾಂಸರಾದ ಶ್ರೀ ರಾಜಗೋಪಾಲ ಬಲ್ಲಾಳರೂ ಪುರೋಹಿತ ಪ್ರಾಧ್ಯಾಪಕರಾದ ಚಿತ್ರಾಪುರ ಶ್ರೀ ಗೋಪಾಲಕೃಷ್ಣಾಚಾರ್ಯರೂ ಈ ಗ್ರಂಥವನ್ನು ಆಮೂಲಾಗ್ರ ಪರಿಶೋಧಿಸಿ ತಮ್ಮ ಅಮೂಲ್ಯ ಸಲಹೆಗಳನ್ನಿತ್ತಿದ್ದಾರೆ. ಅವರಿಗೆ ಅನೇಕ ಧನ್ಯವಾದಗಳನ್ನರ್ಪಿಸುತ್ತೇನೆ.

ಶಿವಳ್ಳಿ ಬ್ರಾಹ್ಮಣ ಪುರೋಹಿತ ಸಂಘದ ಅಧ್ಯಕ್ಷರಾದ ಶ್ರೀ ವಿಟ್ಠಲ ಭಟ್ ಹಾಗೂ ಸಮಿತಿ ಸದಸ್ಯರು ಗ್ರಂಥಪ್ರಕಾಶನದ ಬಗ್ಗೆ ಬಹಳ ಮುತುವರ್ಜಿ ವಹಿಸಿದ್ದಾರೆ. ಅವರಿಗೆ ಈ ಗ್ರಂಥ ಚಿರಋಣಿಯಾಗಿದೆ.

ಕಂಪ್ಯೂಟರ್ ಅಕ್ಷರ ಸಂಯೋಜನೆಮಾಡಿ ಸಹಕರಿಸಿದ ಶ್ರೀಮತಿ ಸ್ವರ್ಣಲತಾ ಮತ್ತು ಡಾ। ಪದ್ಮನಾಭ ಕೇಕುಣ್ಣಾಯ ದಂಪತಿಗಳಿಗೆ ಮನಃಪೂರ್ವಕ ಕೃತಜ್ಞತೆಗಳು.

ಚಿರಂಜೀವಿ ಕೆ. ಜಿ. ಅಶೋಕನು ನನ್ನ ಸೂಚನೆಯಂತೆ ವ್ಯಾಖ್ಯಾನವನ್ನು ರಚಿಸಿದ್ದಾನೆ. ಸಹೃದಯ ವಿದ್ವಾಂಸರು ಇದನ್ನು ಹಂಸಕ್ಷೀರನ್ಯಾಯದಂತೆ ಪರಿಗ್ರಹಿಸಬೇಕಾಗಿ ಕೋರುತ್ತೇನೆ.

ಮುಹೂರ್ತಜಿಜ್ಞಾಸುಗಳು ಈ ಗ್ರಂಥವನ್ನು ಪರಿಶೀಲನೀಯವೆಂದು ಪರಿಗ್ರಹಿಸಿದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ

॥ ಶ್ರೀ ಸೂರ್ಯನಾರಾಯಣಃ ಪ್ರಸೀದತು ॥

**ಕೆ. ವಿ. ಗೋಪಾಲ ಭಟ್**

'ಜ್ಯೋತಿರ್ಮಂದಿರಂ'
ಕಲ್ಯ, ಉಳಿಯಾರಗೋಳಿ ಗ್ರಾಮ
ಅಂಚೆ ಕಾಪು -574 106
ಉಡುಪಿ ತಾಲೂಕು ಮತ್ತು ಜಿಲ್ಲೆ
Ph 52192 (08252)

# ವಿಷಯಾನುಕ್ರಮಣಿಕಾ

ಶ್ರೀಶ್ರೀ ವಿಶ್ವೇಶತೀರ್ಥಸ್ವಾಮೀಜಿ
ಪರ್ಯಾಯ ಶ್ರೀ ಪೇಜಾವರ ಅಧೋಕ್ಷಜ ಮಠ
ಜಗದ್ಗುರು ಶ್ರೀಮಧ್ವಾಚಾರ್ಯ ಸಂಸ್ಥಾನ
ಉಡುಪಿ-576 101.
ದೂರವಾಣಿ : 08252-26598

# ಅನುಗ್ರಹಸಂದೇಶ

ನಮ್ಮ ಉಡುಪಿಯ ಅಷ್ಟಮಠಗಳ ಶಿಷ್ಯರಿಗೆ ನಮ್ಮ ಸಂಪ್ರದಾಯಕ್ಕನುಗುಣವಾಗಿ ಶಾಸ್ತ್ರೀಯ ಆಧಾರದಿಂದ ಮುಹೂರ್ತಗಳ ಪರಿಚಯವನ್ನು ನೀಡುವ ಗ್ರಂಥದ ಆವಶ್ಯಕತೆಯು ವಿಶೇಷವಾಗಿದೆ ಈ ಕೊರತೆಯನ್ನು ನೀಗುವ ಪ್ರಯತ್ನವು ಶಿವಳ್ಳಿ ಪುರೋಹಿತರ ಸಂಘದಿಂದ ನಡೆದಿರುವುದು ಅತ್ಯಂತ ಸೂಕ್ತವಾಗಿದೆ ಕಲ್ಯ ಗೋಪಾಲ ಭಟ್ಟರು ವಿಶೇಷ ಪರಿಶ್ರಮ ವಹಿಸಿ ಧರ್ಮಶಾಸ್ತ್ರಗಳ ಸರಿಯಾದ ಅಧ್ಯಯನ ನಡೆಸಿ, ಮುಹೂರ್ತಗಳ ಕೈಗನ್ನಡಿಯೆನಿಸುವ ಈ ಪುಸ್ತಕವನ್ನು ರಚಿಸಿದ್ದಾರೆ. ಧಾರ್ಮಿಕ ಜನತೆಗೆ ಅತ್ಯಂತ ಉಪಯುಕ್ತವಾದ ಈ ಕೃತಿಯನ್ನು ಪ್ರಕಟಿಸಲೂ ಶಿವಳ್ಳಿ ಬ್ರಾಹ್ಮಣ ಪುರೋಹಿತ ಸಂಘವು ಮುಂದೆ ಬಂದಿರುತ್ತದೆ ಜನತೆಯು ಈ ಕೃತಿಯ ಲಾಭವನ್ನು ಪಡೆಯಲೆಂದು ಆಶಿಸಿ ಗ್ರಂಥಕರ್ತರಿಗೂ ಶಿವಳ್ಳಿ ಬ್ರಾಹ್ಮಣ ಪುರೋಹಿತ ಸಂಘಕ್ಕೆ ಶ್ರೀಕೃಷ್ಣನ ಮತ್ತು ಶ್ರೀಮದಾಚಾರ್ಯರ ಅನುಗ್ರಹವನ್ನು ಕೋರುತ್ತೇವೆ.

*ದಿನಾಂಕ : 18-11-2001* *ಸಹಿ /*

*(ಶ್ರೀವಿಶ್ವೇಶತೀರ್ಥಸ್ವಾಮೀಜಿ)*

# ಶುಭಾಶಂಸನ

ಶಾಸ್ತ್ರೋಕ್ತ ಕರ್ಮಗಳು ಸಕಾಲದಲ್ಲಿ ಆಚರಿಸಲ್ಪಟ್ಟಾಗಲೇ ಫಲಪ್ರದಗಳಾಗುವವು. ಕರ್ಮಾಚರಣೆಗೆ ಆವಶ್ಯಕವಾದ ಕಾಲದ ಮಾಹಿತಿಯನ್ನು ಪಡೆದುಕೊಳ್ಳುವುದಕ್ಕಾಗಿಯೇ ಜ್ಯೋತಿಷ್ಯ ವೇದಾಂಗವಾಗಿ ಪರಿಗಣಿಸಲ್ಪಟ್ಟಿದೆ. ಇಂತಹ ಜ್ಯೋತಿಷ್ಯ ಹಾಗೂ ಧರ್ಮಶಾಸ್ತ್ರಗಳ ಆಧಾರದಲ್ಲಿ ಹೊರಟ ಅನೇಕ ಗ್ರಂಥಗಳು ಕರ್ಮಾಚರಣೆಗೆ ಉಚಿತವಾದ ಕಾಲವನ್ನು ತಿಳಿಸುತ್ತಿವೆ. ಆದರೆ ಆ ಗ್ರಂಥಗಳಲ್ಲಿ ಹೆಚ್ಚಿನವು ಯಾವುದಾದರೊಂದು ಪ್ರದೇಶವಿಶೇಷಕ್ಕೋ ಜನಾಂಗ ವಿಶೇಷಕ್ಕೋ ಸಂಬಂಧಿಸಿದಂತೆಯೇ ಕಾಲದ ಮಾಹಿತಿಯನ್ನು ನೀಡುತ್ತಿರುವವು. ಆದುದರಿಂದ ಶ್ರೀ ಮಧ್ವಮತಕ್ಕೆ ಸಂಬಂಧಿಸಿರುವ ತೌಳವವಿಚಾರಗಳಿಗೆ ಹೊಂದಿಕೆಯಾಗುವಂತೆ ಕಾಲದ, ಗ್ರಾಹ್ಯಾಗ್ರಾಹ್ಯತೆಯನ್ನು ಗುರುತಿಸಿಕೊಡುವ ಒಂದು ಪ್ರತ್ಯೇಕ ಗ್ರಂಥದ ಆವಶ್ಯಕತೆ ಇದೆ ಎಂದು ಪರಿಶೀಲಿಸ ಶ್ರೀ ಕಲ್ಯ ಗೋಪಾಲ ಭಟ್ಟರು 'ಮುಹೂರ್ತಸನ್ಮಾರ್ಗದರ್ಶಿನಿ' ಎಂಬ ಮುಹೂರ್ತ ಗ್ರಂಥವನ್ನು ರಚಿಸಿರುವುದು ತುಂಬ ಅಭಿನಂದನೀಯ.

ಅನೇಕ ಶಾಸ್ತ್ರಗಳಲ್ಲಿ ವಿದ್ವಾಂಸರಾಗಿರುವ ಶ್ರೀ ಗೋಪಾಲ ಭಟ್ಟರಿಂದ ಇನ್ನೂ ಹೆಚ್ಚಿನ ವಾಙ್ಮಯಸೇವೆ ಸಲ್ಲುವಂತಾಗಲೆಂದು ಆಶಿಸುವೆವು.

'ಶಿವಳ್ಳಿ ಬ್ರಾಹ್ಮಣ ಪುರೋಹಿತ ಸಂಘ'ದವರು ಇದನ್ನು ಪ್ರಕಟಿಸಿ, ಇದರ ಪ್ರಯೋಜನವು ಸಜ್ಜನರಿಗೆ ದೊರಕುವಂತೆ ಮಾಡಿರುವರು. ಪುರೋಹಿತ ಸಂಘದವರಿಗೂ ಅಭಿನಂದನೆಗಳು

ಅಷ್ಟಮಠಗಳಿಗೆ ಸೇರಿದ ಎಲ್ಲ ಶಿಷ್ಯರೂ ಪಂಚಾಂಗಕರ್ತರೂ ಈ ಗ್ರಂಥವನ್ನು ಆಧರಿಸಿಕೊಂಡೇ ಮುಹೂರ್ತಗಳನ್ನು ಆಯ್ಕೆ ಮಾಡುವಂತಾಗಲಿ ಆ ಮೂಲಕ ಆದಷ್ಟು ಸತ್ಕಾಲದಲ್ಲಿಯೇ ಸತ್ಕಾರ್ಯಗಳೆಲ್ಲ ನಡೆಯುವಂತಾಗಲಿ ಎಂದು ಶ್ರೀಕೃಷ್ಣಮುಖ್ಯಪ್ರಾಣರನ್ನು ಪ್ರಾರ್ಥಿಸಿ ಹಾರೈಸುವೆವು.

ಉಡುಪಿ
*ದಿನಾಂಕ : ೧೮-೧೧-೨೦೦೧*

ಶ್ರೀವಿಶ್ವಪ್ರಸನ್ನತೀರ್ಥಸ್ವಾಮೀಜಿ
ಪೇಜಾವರ ಅಧೋಕ್ಷಜ ಮಠ

ಓಂ

ಶ್ರೀಕೃಷ್ಣಾಯ ನಮಃ

ಶ್ರೀಗುರುಭ್ಯೋ ನಮಃ

# ॥ ಮುಹೂರ್ತಸನ್ಮಾರ್ಗದರ್ಶಿನಿ ॥

'ಪ್ರಶ್ನಸಂಗ್ರಹ ಪೂರ್ವಾರ್ಧ'ದ ಪರಿಶಿಷ್ಟದೊಂದಿಗೆ
'ಭಾವಬೋಧಿನೀ' ವ್ಯಾಖ್ಯಾಸಹಿತ

## ॥ ಸಂಜ್ಞಾಧ್ಯಾಯಃ ॥ 1 ॥

ವ್ಯತ್ಯಸ್ತಾಂಘ್ರಿಂ ದ್ವಿನೇತ್ರಂ ತ್ವಹಿಖಗಪಶುಭಿಃ ಸೇವ್ಯಮಾನಂ ಸಮನ್ತಾತ್
ಗೋಪೀನಾಂ ವತ್ಸಪಾನಾಮಧಿಕ ಶುಭಕರಂ ವೇಣುಮಾಪೂರಯನ್ತಮ್ ।
ಕಾರುಣ್ಯಾಪೂರ್ಣನೇತ್ರಂ ಧನಪಶುತನಯಾನ್ ವರ್ಧಯನ್ತಂ ಜನಾನಾಮ್
ವಂದೇ ಬರ್ಹಾವತಂಸಂ ಸುರಮುನಿನಮಿತಂ ವೇಣುಗೋಪಾಲಕೃಷ್ಣಮ್ ॥
॥ 1 ॥

ತಾತ್ಪರ್ಯ: ಪಾದಗಳನ್ನು ವ್ಯತ್ಯಸ್ತವಾಗಿ ಇಟ್ಟಿರುವ, ಸೂರ್ಯಚಂದ್ರರೇ ಕಣ್ಣಾಗಿಯುಳ್ಳ, ಶೇಷ-ಗರುಡ-ಕಾಮಧೇನು ಆದಿಗಳಿಂದ ಸುತ್ತಲೂ ಸೇವ್ಯಮಾನನಾದ, ಗೋಪೀಗೋಪ ಆದಿಗಳಿಗೆ ಅತ್ಯಂತ ಆನಂದವನ್ನುಂಟುಮಾಡುವ, ಇಡೀ ಜಗತ್ತನ್ನೆ ತನ್ನ ವೇಣುನಾದದಿಂದ ಮೋಹಗೊಳಿಸುತ್ತಿರುವ, ಕರುಣಾಪೂರ್ಣ ಕಟಾಕ್ಷವನ್ನು ಬೀರುತ್ತಿರುವ, ತನ್ನ ಭಕ್ತಜನರಿಗೆ ಧನಧಾನ್ಯಸಮೃದ್ಧಿ-ಪಶುಸಮೃದ್ಧಿ-ಪುತ್ರಪೌತ್ರಾಭಿವೃದ್ಧಿಯನ್ನು ಕರುಣಿಸುತ್ತಿರುವ, ಕಿರೀಟಸ್ಥಾನದಲ್ಲಿ ನವಿಲುಗರಿಯಿಂದ ಅಲಂಕೃತನಾದ, ಬ್ರಹ್ಮಾದಿದೇವತೆಗಳಿಂದಲೂ-ಸನಕಾದಿ ಋಷಿಗಳಿಂದಲೂ ಸ್ತುತಿಸಲ್ಪಡುತ್ತಿರುವ ವೇಣುಗೋಪಾಲಕೃಷ್ಣನನ್ನು ಧ್ಯಾನಿಸುತ್ತೇನೆ.

ಗುರೂನ್ ದೇವಾನ್ನಮಸ್ಕೃತ್ಯ ಗುರೂಕ್ತೀಃ ಪರಿಶೀಲ್ಯ ಚ ।
ಮೌಹೂರ್ತಿಕ ಹಿತಾರ್ಥಾಯ ಕುರ್ವೇ ಸನ್ಮಾರ್ಗದರ್ಶಿನೀಮ್ ॥ 3 ॥

ಗುರುಗಳನ್ನೂ ದೇವತೆಗಳನ್ನೂ ನಮಸ್ಕರಿಸಿ, ಗುರುವಚನಗಳನ್ನು ಪರಿಶೀಲಿಸಿ, ಮೌಹೂರ್ತಿಕ ಹಿತಕ್ಕೋಸ್ಕರ 'ಸನ್ಮಾರ್ಗದರ್ಶಿನಿ' ಎಂಬ ಸಂಗ್ರಹಕೃತಿಯನ್ನು ರಚಿಸುತ್ತೇನೆ.

## ।। ಮೇಷಾದಿ ರಾಶಿಲಕ್ಷಣ ।।

ಮೇಷಃ ಛಾಗಸಮಃ ಪ್ರೋಕ್ತೋ ವೃಷಭೋ ವೃಷಭಾಕೃತಿಃ ।
ಮಿಥುನಶ್ಚಾರ್ಧನಾರೀ ಸ್ಯಾತ್ ಗದಾವೀಣಾಧರಃ ಸ್ಮೃತಃ ।। 3 ।।

ಮೇಷವು ಆಡಿನಂತೆ, ವೃಷಭವು ಎತ್ತಿನಂತೆ, ಮಿಥುನವು ಗದೆ ಮತ್ತು ವೀಣೆ ಕೈಯಲ್ಲಿರುವ ಸ್ತ್ರೀ ಪುರುಷಸ್ವರೂಪವನ್ನು ಹೊಂದಿರುತ್ತದೆ

ಕರ್ಕಟಃ ಕರ್ಕಟಾಂಗಃ ಸ್ಯಾತ್ ಸಿಂಹಃ ಸಿಂಹಾಕೃತಿಃ ಸ್ಮೃತಃ ।
ಕನ್ಯಾ ಸದೀಪಾ ಪ್ಲವಗಾ ತುಲಾರಾಶಿಸ್ತುಲಾಧರಃ ।। 4 ।।
ವ್ಯಾಪಾರೀ ಪಣ್ಯವೀಥಿಸ್ಥೋ ವೃಶ್ಚಿಕೋ ವೃಶ್ಚಿಕಾಕೃತಿಃ ।। 5 ।।

ಕರ್ಕಾಟಕವು ಏಡಿಯಂತೆಯೂ ಸಿಂಹವು ಸಿಂಹದಂತೆಯೂ ಕನ್ಯಾರಾಶಿಯು ದೋಣಿಯಲ್ಲಿ ದೀಪ ಹಿಡಿದುಕೊಂಡು ಹೋಗುವ ಕನ್ನಿಕೆಯಂತೆಯೂ ತುಲಾ ರಾಶಿಯು ಅಂಗಡಿಗಳಿರುವ ಬೀದಿಯಲ್ಲಿ ತಕ್ಕಡಿ ಹಿಡಿದುಕೊಂಡಿರುವ ವ್ಯಾಪಾರಿಯಂತೆಯೂ ವೃಶ್ಚಿಕವು ಚೇಳಿನಂತೆಯೂ ಇರುತ್ತವೆ.

ಕಟ್ಯಧೋ ಹಯರೂಪಶ್ಚ ಶರಚಾಪಧರೋ ಧನುಃ ।
ಮಕರೋ ಮೃಗರೂಪಃ ಸ್ಯಾತ್ ಕಂಠಾಧೋ ನಕ್ರರೂಪಧೃಕ್ ।। 6 ।।

ಧನೂರಾಶಿಗೆ ಕೆಳಗೆ ಕುದುರೆಯ ರೂಪವೂ ಮೇಲೆ ಬಿಲ್ಲುಬಾಣ ಹಿಡಿದುಕೊಂಡ ಮನುಷ್ಯನ ಸ್ವರೂಪವೂ ಇದೆ. ಮಕರವು ಮೇಲೆ ಜಿಂಕೆಯ ರೂಪವೂ, ಕೆಳಗೆ ಮೊಸಳೆಯ ರೂಪವೂ ಆಗಿರುತ್ತದೆ.

ಕುಂಭಸ್ತು ರಿಕ್ತಘಟವಾನ್ ಪುರುಷಃ ಪರಿಕೀರ್ತಿತಃ ।
ಮತ್ಸ್ಯಯುಗ್ಮಂ ಚ ಪುಚ್ಛಾಸ್ಯಮೀನಮನ್ಯೋನ್ಯತಃ ಸ್ಮೃತಮ್ ।। 7 ।।

ಕುಂಭರಾಶಿಗೆ ರಿಕ್ತಘಟವುಳ್ಳ ಪುರುಷಸ್ವರೂಪವೂ, ಮೀನರಾಶಿಗೆ ಪರಸ್ಪರ ಬಾಲವನ್ನು ಬಾಯಲ್ಲಿರಿಸಿದ 2 ಮೀನುಗಳ ಸ್ವರೂಪವೂ ಇರುತ್ತದೆ

## ।। ಕ್ಷೇತ್ರಾದಿ ಷಡ್ವರ್ಗಗಳು ।।

ಕ್ಷೇತ್ರಂ ಚ ಹೋರಾ ದ್ರೇಕ್ಕಾಣೋ ನವಾಂಶೋ ದ್ವಾದಶಾಂಶಕಃ ।
ತ್ರಿಂಶಾಂಶಕಸ್ತು ಸಪ್ತಾಂಶೋ ಗ್ರಹಾಣಾಂ ಸಪ್ತವರ್ಗಕಾಃ ।। 8 ।।

ಕ್ಷೇತ್ರ, ಹೋರಾ, ದ್ರೇಕ್ಕಾಣ, ನವಾಂಶ, ದ್ವಾದಶಾಂಶಕ, ತ್ರಿಂಶಾಂಶಕ, ಸಪ್ತಾಂಶ ಎಂದು ಗ್ರಹಗಳಿಗೆ ಸಪ್ತವರ್ಗಗಳು.

## ।। ಗ್ರಹರ ಸ್ವಕ್ಷೇತ್ರಗಳು ।।

ಕುಜಶುಕ್ರಜ್ಞೇಂದ್ವರ್ಕಜ್ಞಶುಕ್ರಕುಜಜೀವಮಂದ ಶನಿ ಗುರವಃ ।

ಭೇಶಾ ನವಾಂಶಕಾನಾಮಜಮಕರ ತುಲಾ ಕುಲೀರಾದ್ಯಾಃ ॥ 9 ॥

ಕುಜ, ಶುಕ್ರ, ಬುಧ, ಚಂದ್ರ, ರವಿ, ಬುಧ, ಶುಕ್ರ, ಕುಜ, ಗುರು, ಶನಿ, ಶನಿ, ಗುರು –ಇವರು ಮೇಷಾದಿ ರಾಶಿಗಳ ಅಧಿಪತಿಗಳು ಮೇಷ–ಸಿಂಹ–ಧನು, ವೃಷಭ– ಕನ್ಯಾ–ಮಕರ, ಮಿಥುನ–ತುಲಾ–ಕುಂಭ, ಕರ್ಕಟಕ–ವೃಶ್ಚಿಕ–ಮೀನ –ಈ ರಾಶಿಗಳ ನವಾಂಶಕಗಳು ಅನುಕ್ರಮವಾಗಿ ಮೇಷ, ಮಕರ, ತುಲಾ, ಕರ್ಕಟಕಗಳಿಂದ ಪ್ರಾರಂಭವಾಗುತ್ತದೆ

## ॥ ದ್ರೇಕ್ಕಾಣ ಹೋರೆಗಳು ॥

ಸ್ವಗೃಹಾದ್ವಾದಶಭಾಗಾ ದ್ರೇಕ್ಕಾಣಾಃ ಪ್ರಥಮಪಂಚ ನವಪಾನಾಮ್ ।
ಹೋರೇ ವಿಷಮೇಽರ್ಕೇಂದ್ವೋಃ ಸಮರಾಶೌ ಚಂದ್ರತೀಕ್ಷ್ಣಾಂಶ್ವೋಃ ॥ 10 ॥

ಪ್ರತಿಯೊಂದು ರಾಶಿಯಲ್ಲಿಯೂ ಆಯಾ ರಾಶಿಯಿಂದಲೆ ದ್ವಾದಶಾಂಶವು ಸುರುವಾಗುತ್ತದೆ ಪ್ರತಿ ರಾಶಿಯಲ್ಲಿಯೂ ಸುರುವಿನ ದ್ರೇಕ್ಕಾಣಾಧಿಪತಿ ಅದೇ ರಾಶಿಯ ಅಧಿಪತಿಯೂ ದ್ವಿತೀಯ ದ್ರೇಕ್ಕಾಣಾಧಿಪತಿ ಪಂಚಮಾಧಿಪತಿಯೂ ತೃತೀಯ ದ್ರೇಕ್ಕಾಣಾಧಿಪತಿ ನವಮಾಧಿಪತಿಯೂ ಆಗಿರುತ್ತಾನೆ. ಓಜರಾಶಿಯಲ್ಲಿ ಮೊದಲ ಹೋರೆ ಸೂರ್ಯನದು; 2ನೇ ಹೋರೆ ಚಂದ್ರನದು. ಯುಗ್ಮರಾಶಿಯಲ್ಲಿ ಮೊದಲ ಹೋರೆ ಚಂದ್ರನದ್ದು; 2ನೇ ಹೋರೆ ಸೂರ್ಯನದ್ದೂ ಆಗಿರುತ್ತದೆ

## ॥ ತ್ರಿಂಶಾಂಶ ॥

ಕುಜಯಮಜೀವಜ್ಞಸಿತಾಃ ಪಂಚೇಂದ್ರಿಯವಸುಮುನೀಂದ್ರಿಯಾಂಶಾನಾಮ್ ।
ವಿಷಮೇ ಸಮ ಉತ್ಕ್ರಮತಸ್ತ್ರಿಂಶಾಂಶೇಶಾಸ್ತಥಾ ಕಲ್ಪ್ಯಾಃ ॥ 11 ॥

ಕುಜನಿಗೆ 5 ಭಾಗ, ಶನಿಗೆ 5 ಭಾಗ, ಗುರುವಿಗೆ 8 ಭಾಗ, ಬುಧನಿಗೆ 7 ಭಾಗ, ಶುಕ್ರನಿಗೆ 5 ಭಾಗ –ಈ ಅನುಕ್ರಮದಲ್ಲಿ ಓಜರಾಶಿಗಳಲ್ಲಿ ತ್ರಿಂಶಾಂಶ ವಿಭಾಗವಿರುತ್ತದೆ. ಯುಗ್ಮರಾಶಿಯಲ್ಲಿ ಶುಕ್ರ ಬುಧ ಗುರು ಶನಿ ಕುಜರು ಕ್ರಮವಾಗಿ ಅವರವರ ಭಾಗಗಳಿಗೆ ಅಧಿಪತಿಗಳಾಗಿರುತ್ತಾರೆ.

## ॥ ಪೃಷ್ಠೋದಯಾದಿ ಸಂಜ್ಞೆ ॥

ಗೋಜಾಶ್ವಿಕರ್ಕಿಮಿಥುನಾಃ ಸಮೃಗಾ ನಿಶಾಖ್ಯಾಃ
ಪೃಷ್ಠೋದಯಾ ವಿಮಿಥುನಾಃ ಕಥಿತಾಸ್ತ ಏವ ।
ಶೀರ್ಷೋದಯಾ ದಿನಬಲಾಶ್ಚ ಭವಂತಿ ಶೇಷಾಃ
ಲಗ್ನಂ ಸಮೇತ್ಯುಭಯತಃ ಪೃಥುರೋಮಯುಗ್ಮಮ್ ॥ 12 ॥

ಮೇಷ, ವೃಷಭ, ಮಿಥುನ, ಕರ್ಕಾಟಕ, ಧನು, ಮಕರಗಳು ರಾತ್ರಿ ರಾಶಿಗಳು. ಮಿಥುನ ಬಿಟ್ಟು ಇವೇ ರಾಶಿಗಳು ಪೃಷ್ಠೋದಯಗಳು. ಉಳಿದ ರಾಶಿಗಳು

ಹಗಲುರಾಶಿಗಳು ಮತ್ತು ಶೀರ್ಷೋದಯಗಳು ಮೀನರಾಶಿಯು ಮಾತ್ರ ಉಭಯೋದಯರಾಶಿಯಾಗಿರುತ್ತದೆ.

## ॥ ಕೇಂದ್ರಾದಿ ಸಂಜ್ಞೆ ॥

ಕಂಟಕಕೇಂದ್ರ ಚತುಷ್ಟಯಸಂಜ್ಞಾಃ
ಸಪ್ತಮಲಗ್ನ ಚತುರ್ಥಖಭಾನಾಮ್ ।
ತೇಷು ಯಥಾಭಿಹಿತೇಷು ಬಲಾಢ್ಯಾಃ
ಕೀಟನರಾಂಬುಚರಾಃ ಪಶವಶ್ಚ ॥ 13 ॥

ಲಗ್ನ, ಚತುರ್ಥ, ಸಪ್ತಮ, ದಶಮಗಳಿಗೆ ಕೇಂದ್ರ ಚತುಷ್ಟಯ ಅಥವಾ ಕಂಟಕವೆಂದು ಸಂಜ್ಞೆ. ಮನುಷ್ಯರು, ಜಲಚರರು, ಕೀಟಗಳು ಮತ್ತು ಪಶುಗಳು ಅನುಕ್ರಮವಾಗಿ ಇದರಲ್ಲಿ ಬಲಿಷ್ಠರು.

## ॥ ಉಚ್ಚಾದಿ ಸಂಜ್ಞೆಗಳು ॥

ಆದಿತ್ಯಾದಜಗೋಮೃಗಾಸ್ಯವನಿತಾಃ ಕರ್ಕೀ ಚ ಮೀನಸ್ತುಲಾ
ಸ್ತ್ವೋಚ್ಚರ್ಕ್ಷಾಣ್ಯಥ ತೇಷು ದಿಗ್ಭೃತವಹಾನಷ್ಟೋತ್ತರಾಂ ವಿಂಶತಿಮ್ ।
ತಿಥ್ಯಂಶಾನ್ ಶರಸಪ್ತವಿಂಶತಿಕೃತೀರತ್ಯುಚ್ಚಕಾಂಶಾನ್ ವಿದು-
ಸ್ತೇಭ್ಯಃ ಸಪ್ತಮರಾಶಯೋಽಂಶಕಯುತಾ ನೀಚಾ ಗ್ರಹಾಣಾಂ ಕ್ರಮಾತ್ ॥
॥ 14 ॥

ಸೂರ್ಯಾದಿಗಳಿಗೆ ಮೇಷ, ವೃಷಭ, ಮಕರ, ಕನ್ಯಾ, ಕರ್ಕಟಕ, ಮೀನ, ತುಲಾಗಳು ಉಚ್ಚಕ್ಷೇತ್ರಗಳು ಇವುಗಳಲ್ಲಿ ಮೊದಲಿನ 10, 3, 28, 15, 5, 27, 20ರ ವರೆಗಿನ ಭಾಗಗಳು ಕ್ರಮವಾಗಿ ಅತ್ಯುಚ್ಚವಾಗಿರುತ್ತವೆ. ಅವುಗಳಿಂದ ಸಪ್ತಮರಾಶಿಗಳು ನೀಚಗಳೂ ಅಷ್ಟೇ ಭಾಗಗಳ ವರೆಗೆ ಅತಿನೀಚಗಳೂ ಆಗಿರುತ್ತವೆ

## ॥ ಮೂಲತ್ರಿಕೋಣ ರಾಶಿಗಳು ॥

ಸಿಂಹೇ ವಿಂಶತಿರಾದಿತೋ ಗವಿ ಪರೇ ಸರ್ವೇಽಂಶಕಾಸ್ತುಂಗತೋ
ಮೇಷೇ ದ್ವಾದಶ ಪಂಚ ಯೋಷಿತಿ ಪರೇ ತುಂಗಾದ್ಧಯಾಂಗೇ ದಶ ।
ಜೂಕೇ ಪಂಚ ಘಟೇ ತು ವಿಂಶತಿರಮೀ ಮೂಲತ್ರಿಕೋಣಾಹ್ವಯಾಃ
ಸೂರ್ಯಾದೇಃ ಕ್ರಮಶೋ ಗ್ರಹಸ್ಯ ಕಥಿತಾಃ ಶೇಷಾಃ ಸ್ವರಾಶ್ಯಂಶಕಾಃ ॥
॥ 15 ॥

ಸಿಂಹದಲ್ಲಿ ಮೊದಲ 20 ಭಾಗಗಳು, ವೃಷಭದಲ್ಲಿ 3ರಿಂದ 30ರ ವರೆಗೆ, ಮೇಷದಲ್ಲಿ 12 ಭಾಗಗಳು, ಕನ್ಯಾದಲ್ಲಿ 15ರಿಂದ 20ರ ವರೆಗೆ, ಧನುವಿನಲ್ಲಿ 10 ಭಾಗಗಳ ವರೆಗೆ, ತುಲಾದಲ್ಲಿ 5ರ ವರೆಗೆ, ಕುಂಭದಲ್ಲಿ 20ರ ವರೆಗೆ ಸೂರ್ಯಾದಿಗಳಿಗೆ ಮೂಲತ್ರಿಕೋಣಗಳು ಅನಂತರ ಅದೇ ರಾಶಿಗಳಲ್ಲಿ ಸ್ವಕ್ಷೇತ್ರಾದಿಫಲವಿರುತ್ತದೆ.

## ॥ ದೃಷ್ಟಿ ವಿಷಯ ॥

ಸೌರಿಸ್ತೃತೀಯದಶಮೌ ಗುರುಸ್ತ್ರಿಕೋಣಂ ಕುಜಸ್ತು ಚತುರಶ್ರಮ್ ।
ಪಶ್ಯತಿ ಸಮಗ್ರಮಿತರೇ ಚರಣವಿವೃದ್ಧ್ಯಾಥ ಸಪ್ತಮಂ ಸರ್ವೇ ॥ 16 ॥

ಶನಿಯು 3 ಮತ್ತು 10ನೇ ಭಾವಗಳನ್ನೂ ಗುರುವು 5 ಮತ್ತು 9ನೇ ಭಾವಗಳನ್ನೂ, ಕುಜನು 4 ಮತ್ತು 8ನೇ ಭಾವಗಳನ್ನೂ ಎಲ್ಲಾ ಗ್ರಹರೂ ಸಪ್ತಮವನ್ನೂ ನೋಡುತ್ತಾರೆ ಎಲ್ಲಾ ಗ್ರಹರಿಗೂ 3-10ಕ್ಕೆ ಪಾದದೃಷ್ಟಿಯೂ 5-9ನೇ ಸ್ಥಾನಗಳಿಗೆ ಅರ್ಧದೃಷ್ಟಿಯೂ 4-8ಕ್ಕೆ ಮುಕ್ಕಾಲುದೃಷ್ಟಿಯೂ ಸಪ್ತಮಕ್ಕೆ ಪೂರ್ಣದೃಷ್ಟಿಯೂ ಇರುತ್ತವೆ.

## ॥ ಗ್ರಹಗಳ ಶತ್ರುಮಿತ್ರತ್ವ ॥

ಶತ್ರೂ ಮಂದಸಿತೌ ಸಮಃ ಶಶಿಸುತೋ ಮಿತ್ರಾಣಿ ಶೇಷಾ ರವೇಃ
ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚ ಸುಹೃದೌ ಶೇಷಾಃ ಸಮಾಃ ಶೀತಗೋಃ ।
ಜೀವೇಂದೂಷ್ಣಕರಾಃ ಕುಜಸ್ಯ ಸುಹೃದೋ ಜ್ಞೋಽರಿಃ ಸಿತಾರ್ಕೀ ಸಮೌ
ಮಿತ್ರೇ ಸೂರ್ಯಸಿತೌ ಬುಧಸ್ಯ ಹಿಮಗುಃ ಶತ್ರುಃ ಸಮಾಶ್ಚಾಪರೇ ॥ 17 ॥

ರವಿಗೆ ಶುಕ್ರಶನಿಗಳು ಶತ್ರುಗಳು; ಬುಧನು ಸಮ; ಇತರರು ಮಿತ್ರರು ಚಂದ್ರನಿಗೆ ರವಿಬುಧರು ಮಿತ್ರರು; ಇತರರು ಸಮರು. ಕುಜನಿಗೆ ರವಿಚಂದ್ರ ಗುರುಗಳು ಮಿತ್ರರು; ಬುಧ ಶತ್ರು; ಶುಕ್ರಶನಿಗಳು ಸಮರು ಬುಧನಿಗೆ ಸೂರ್ಯಶುಕ್ರರು ಮಿತ್ರರು; ಚಂದ್ರನು ಶತ್ರು; ಇತರರು ಸಮರು.

ಸೂರೇಃ ಸೌಮ್ಯಸಿತಾವರೀ ರವಿಸುತೋ ಮಧ್ಯಃ ಪರೇ ತ್ವನ್ಯಥಾ
ಸೌಮ್ಯಾರ್ಕೀ ಸುಹೃದೌ ಸಮೌ ಕುಜಗುರೂ ಶುಕ್ರಸ್ಯ ಶೇಷಾವರೀ ।
ಶುಕ್ರಜ್ಞೌ ಸುಹೃದೌ ಸಮಃ ಸುರಗುರುಃ ಸೌರಸ್ಯ ಚಾನ್ಯೇಽರಯೋ
ಯೇ ಪ್ರೋಕ್ತಾಃ ಸುಹೃದಸ್ತ್ರಿಕೋಣಭವನಾತ್ತೇಽಮೀ ಮಯಾ ಕೀರ್ತಿತಾಃ ॥
॥ 18 ॥

ಗುರುವಿಗೆ ಬುಧಶುಕ್ರರು ಶತ್ರುಗಳು; ಶನಿ ಮಧ್ಯ; ಇತರರು ಮಿತ್ರರು. ಶುಕ್ರನಿಗೆ ಬುಧಶನಿಗಳು ಮಿತ್ರರು; ಕುಜಗುರುಗಳು ಸಮರು; ಇತರರು ಶತ್ರುಗಳು. ಶನಿಗೆ ಬುಧಶುಕ್ರರು ಮಿತ್ರರು; ಗುರುವು ಸಮನು; ಇತರರು ಶತ್ರುಗಳು ಆಗಿರುತ್ತಾರೆ.

## ॥ ತತ್ಕಾಲಮೈತ್ರಿ ॥

ಅನ್ಯೋನ್ಯಸ್ಯ ಧನವ್ಯಯಾಯ ಸಹಜವ್ಯಾಪಾರ ಬಂಧುಸ್ಥಿತಾಃ
ತತ್ಕಾಲೇ ಸುಹೃದಃ ಸ್ವತುಂಗಭವನೇಽಪ್ಯೇತೇಽರಯಸ್ತ್ವನ್ಯಥಾ ।

ದ್ವ್ಯೇಕಾಸುಕ್ತಭವಾನ್ ಸುಹೃತ್ ಸಮರಿಪೂನ್ ಸಂಚಿಂತ್ಯ ನೈಸರ್ಗಿಕಾನ್
ತತ್ಕಾಲೇನ ಪುನಸ್ತು ತಾನಧಿಸುಹೃನ್ಮಿತ್ರಾದಿಭಿಃ ಕಲ್ಪಯೇತ್ ॥ 19 ॥

ಗ್ರಹದ 2, 3, 4, 10, 11, 12ನೆ ಭಾವಗಳಲ್ಲಿರುವ ಗ್ರಹವು ಹಾಗೂ ಗ್ರಹದ ಉಚ್ಚಕ್ಷೇತ್ರದಲ್ಲಿರುವ ಇನ್ನೊಂದು ಗ್ರಹವೂ ತತ್ಕಾಲ ಮೈತ್ರಿಯಲ್ಲಿರುತ್ತದೆ ನೈಸರ್ಗಿಕ ಮೈತ್ರಿ–ತತ್ಕಾಲಮೈತ್ರಿ ಎರಡೂ ಇದ್ದರೆ ಅಧಿಮೈತ್ರಿ ಎಂದೂ ಒಂದರಲ್ಲಿ ಮೈತ್ರಿ ಇನ್ನೊಂದರಲ್ಲಿ ಶತ್ರುತ್ವವಿದ್ದರೆ ಸಮತ್ವವೆಂದೂ 2ರಲ್ಲಿಯೂ ಶತ್ರುತ್ವವಿದ್ದರೆ ಅಧಿಶತ್ರುವೆಂದೂ ಕಲ್ಪಿಸಬೇಕು

## ॥ ಕಾಲಹೋರೆ ॥

ದಿನದ್ವಾದಶಾಂಶೋ ಮತಃ ಕಾಲಹೋರಾ
ಪತಿಸ್ತಸ್ಯ ಪೂರ್ವಸ್ಯ ವಾರಾಧಿನಾಥಃ ।
ತತಃ ಷಷ್ಠಷಷ್ಠಾಃ ಕ್ರಮೇಣೇತರೇಷಾಮ್
ನಿಶಾಯಾಂ ತು ವಾರೇಶ್ವರಾತ್ ಪಂಚಮಾದ್ಯಾಃ ॥ 20 ॥

ಒಂದು ದಿವಸಕ್ಕೆ 24 ಕಾಲಹೋರೆಗಳು ಒಂದು ಕಾಲಹೋರೆಯ ಅವಧಿ 1 ಗಂಟೆ ಬೆಳಗ್ಗೆ ಸೂರ್ಯೋದಯಕ್ಕೆ ಆ ವಾರಾಧಿಪತಿಯ ಕಾಲಹೋರೆಯೂ ಅನಂತರ 6ನೆ–6ನೆ ಗ್ರಹದ ಕಾಲಹೋರೆಗಳೂ ಬರುತ್ತವೆ. ಮಾರನೆ ದಿವಸ ಉದಯಕ್ಕೆ 24 ಕಾಲಹೋರೆಗಳು ಮುಗಿದು ಮುಂದಿನ ವಾರದ ಅಧಿಪತಿಯ ಕಾಲಹೋರೆ ಪ್ರಾರಂಭವಾಗುತ್ತದೆ ಪ್ರತಿ ದಿವಸ ಸಂಜೆಗೆ ವಾರಾಧಿಪತಿಯಿಂದ 5ನೆ ಗ್ರಹದ ಕಾಲಹೋರೆ ಬರುತ್ತದೆ.

ರವಿರ್ಭೃಗುರ್ಬುಧಶ್ಚಂದ್ರಃ ಶನಿರ್ಜೀವಃ ಕುಜಃ ಕ್ರಮಾತ್ ॥ 21 ॥

ಕಾಲಹೋರೆಯ ಅಧಿಪತಿಗಳು ಅನುಕ್ರಮವಾಗಿ ರವಿ, ಶುಕ್ರ, ಬುಧ, ಚಂದ್ರ, ಶನಿ, ಗುರು, ಕುಜ, ಪುನಃ ರವ್ಯಾದಿಗಳು ಎಂದು ತಿಳಿಯಬೇಕು.

## ॥ ಯುಕ್ತಿ ಪ್ರಕಾರ ವಿಶೇಷ ಕೃತ್ಯಗಳನ್ನು ನಡೆಸಲಿಕ್ಕಾಗಿ ನಕ್ಷತ್ರಗಳಿಗೆ ವಿಶೇಷ ಸಂಜ್ಞೆಗಳು ॥

ತಿಷ್ಯೋ ವೈಷ್ಣವಮುತ್ತರಾತ್ರಯವಸುಪ್ರಾಚೇತಸಂ ರುದ್ರಭಮ್
ರೋಹಿಣ್ಯಾ ಯುತಮೇತದೃಕ್ಷನವಕಂ ವಿಜ್ಞೇಯಮೂರ್ಧ್ವಾನನಮ್ ।
ಮೈತ್ರಾಶ್ವಿನ್ಯದಿತೀಂದು ಪೌಷ್ಣಪವನ ತ್ವಷ್ಟರ್ಕದೇವೇಂದ್ರಭಮ್
ತಿರ್ಯಗ್ವಕ್ತ್ರಮಧೋಮುಖಂ ತದಪರಂ ತತ್ತತ್ಸಮಂ ತತ್ಫಲಮ್ ॥ 22 ॥

ಪುಷ್ಯ, ಶ್ರವಣ, ಧನಿಷ್ಠಾ, ಶತಭಿಷಾ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ, ಆರ್ದ್ರಾ, ರೋಹಿಣೀ –ಈ 9 ನಕ್ಷತ್ರಗಳು ಊರ್ಧ್ವಮುಖ. ಅಶ್ವಿನೀ, ಪುನರ್ವಸು, ಹಸ್ತ, ಚಿತ್ರಾ, ಸ್ವಾತಿ, ಮೃಗಶಿರೆ, ಅನುರಾಧಾ, ಜ್ಯೇಷ್ಠಾ,

ರೇವತಿ –ಈ 9 ತಿರ್ಯಗ್ವಕ್ತ್ರ ಉಳಿದ 9 ನಕ್ಷತ್ರಗಳು ಅಧೋಮುಖ ಸಂಜ್ಞೆ ಹೊಂದಿರುತ್ತವೆ

## ॥ ನಕ್ಷತ್ರಗಳ ಕ್ಷಿಪ್ರಾದಿ ಸಂಜ್ಞೆಗಳು ॥

ಕ್ಷಿಪ್ರಾಸ್ತೀಕ್ಷ್ಣಕರಾಶ್ವಿನೇಯಗುರವೋ ವಸ್ವಂಬುನಾಥಾನಿಲ–
ಶ್ರೀನಾಥಾದಿತಯಶ್ಚರಾಶ್ಚ ಮೃದವಶ್ಚಿತ್ರಾಂತ್ಯಮಿತ್ರೇಂದವಃ ।
ಉಗ್ರಾ, ಭಾದ್ರಯಮಾರ್ಯಮಾಂಬುಪಿತರೋ ಜ್ಞೇಯಾ ಬುಧೈರುತ್ತರಾ–
ರೋಹಿಣ್ಯಃ ಸ್ಥಿರಸಂಜ್ಞಿತಾಸ್ತದಪರಾಸ್ತೀಕ್ಷ್ಣಾಹ್ವಯಾಸ್ತಾರಕಾಃ ॥ 23 ॥

ಅಶ್ವಿನೀ, ಹಸ್ತಾ, ಪುಷ್ಯಗಳು ಕ್ಷಿಪ್ರನಕ್ಷತ್ರಗಳು. ಪುನರ್ವಸು, ಸ್ವಾತಿ, ಶ್ರವಣ, ಧನಿಷ್ಠಾ, ಶತಭಿಷೆಗಳು ಚರನಕ್ಷತ್ರಗಳು. ಮೃಗಶಿರಾ, ಅನುರಾಧಾ, ಚಿತ್ರಾ, ರೇವತಿಗಳು ಮೃದುನಕ್ಷತ್ರಗಳು. ಭರಣೀ, ಮಖಾ, ಹುಬ್ಬಾ, ಪೂರ್ವಾಷಾಢಾ· ಭಾದ್ರಪದಗಳು ಉಗ್ರನಕ್ಷತ್ರಗಳು. ರೋಹಿಣೀ, ಉತ್ತರಾ, ಉತ್ತರಾಷಾಢಾ, ಉತ್ತರಾ ಭಾದ್ರಾ ನಕ್ಷತ್ರಗಳು ಸ್ಥಿರನಕ್ಷತ್ರಗಳು. ಉಳಿದ ಕೃತ್ತಿಕಾ, ಆರ್ದ್ರಾ, ಆಶ್ಲೇಷಾ, ವಿಶಾಖಾ, ಜ್ಯೇಷ್ಠಾ, ಮೂಲಾಗಳು ತೀಕ್ಷ್ಣನಕ್ಷತ್ರಗಳು ಎಂದು ತಿಳಿಯಬೇಕು.

## ॥ ನಕ್ಷತ್ರಗಳ ಪುಂಸ್ತ್ರೀನಪುಂಸಕ, ದೇವಾಸುರ ಮನುಷ್ಯ ವಿಭಾಗಗಳು ॥

ಅಶ್ವಿನ್ಯಾರ್ಯಜಭಾದ್ರದ್ವಯರವಿಮುರಜಿನ್ಮಾತೃಮಿತ್ರಾಃ ಪುಮಾಂಸಃ
ಕ್ಲೀಬಾಖ್ಯಾ ಮೂಲಶೀತದ್ಯುತಿಜಲಪತಯಸ್ತಾರಕಾ ಯೋಷಿತೋಽನ್ಯಾಃ ।
ದೇವರ್ಕ್ಷಾಣೀಂದುಜೀವಾದಿತಿತಪನಮರುತ್ ಪೌಷ್ಣವಿಷ್ಣ್ವಶ್ವಿಮಿತ್ರಾ–
ಮರ್ತ್ಯಾಃ ಪೂರ್ವೋತ್ತರೇಶಾಂತಕಕಮಲಭುವಃ ಶಿಷ್ಟಭಾನ್ಯಾಸುರಾಣಿ ॥ 24 ॥

ಅಶ್ವಿನೀ, ರೋಹಿಣೀ, ಪುನರ್ವಸು, ಪುಷ್ಯ, ಹಸ್ತ, ಅನುರಾಧಾ, ಶ್ರವಣ, ಪೂರ್ವಾಭಾದ್ರಾ, ಉತ್ತರಾಭಾದ್ರಾ –ಇವು ಪುರುಷನಕ್ಷತ್ರಗಳು. ಮೃಗಶಿರಾ, ಮೂಲಾ, ಶತಭಿಷೆಗಳು ನಪುಂಸಕನಕ್ಷತ್ರಗಳು. ಉಳಿದ 15 ನಕ್ಷತ್ರಗಳು ಸ್ತ್ರೀನಕ್ಷತ್ರ ಗಳು.

ಅಶ್ವಿನೀ, ಮೃಗಶಿರೆ, ಪುನರ್ವಸು, ಪುಷ್ಯಾ, ಹಸ್ತಾ, ಸ್ವಾತೀ, ಅನುರಾಧಾ, ಶ್ರವಣ, ರೇವತಿ –ಈ 9 ದೇವನಕ್ಷತ್ರಗಳು.

ಭರಣೀ, ರೋಹಿಣಿ, ಆರ್ದ್ರೆ, ಹುಬ್ಬೆ, ಪೂರ್ವಾಷಾಢಾ, ಪೂರ್ವಾಭಾದ್ರಾ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ –ಈ 9 ಮನುಷ್ಯನಕ್ಷತ್ರಗಳು. ಉಳಿದವು ರಾಕ್ಷಸನಕ್ಷತ್ರಗಳು.

## ॥ ನಕ್ಷತ್ರಗಳ ಅಂತರಂಗ ಬಹಿರಂಗತ್ವ ॥

ಆಗ್ನೇಯಾದೀನ್ಯತ್ರ ಚತ್ವಾರ್ಯುಡೂನಿ
ಪ್ರಾಜ್ಞೈರುಕ್ತಾನ್ಯಂತರಂಗಾಭಿಧಾನಿ ।
ಮಾತ್ರಾದೀನಿ ತ್ರೀಣಿ ಬಾಹ್ಯಾಹ್ವಯಾನಿ
ಜ್ಞೇಯಾನ್ಯೇವಂ ಸಪ್ತ ಸಪ್ತೇತರಾಣಿ ॥ 25 ॥

ಕೃತ್ತಿಕೆ, ರೋಹಿಣೀ, ಮೃಗಶಿರೆ, ಆರ್ದ್ರೆಗಳು ಅಂತರಂಗನಕ್ಷತ್ರಗಳು. ಪುನರ್ವಸು, ಪುಷ್ಯಾ, ಆಶ್ಲೇಷೆಗಳು ಬಾಹ್ಯನಕ್ಷತ್ರಗಳು. ಇದೇ ರೀತಿ ಮುಂದಿನ 7-7 ನಕ್ಷತ್ರಗಳಿಗೂ ಅಂತರಂಗಬಹಿರಂಗತ್ವವನ್ನು ಕಂಡುಕೊಳ್ಳಬೇಕು.

## ॥ ಮೇಷಾದಿಗಳಿಗೆ ಚರಸ್ಥಿರಾದಿ ಸಂಜ್ಞೆಗಳು ॥

ಮೇಷಾದಾಹ ಚರಂ ಸ್ಥಿರಾಖ್ಯಮುಭಯಂ ದ್ವಾರಂ ಬಹಿರ್ಗರ್ಭಭಂ
ಧಾತುರ್ಮೂಲಮಿತೀಹ ಜೀವ ಉದಿತಂ ಕ್ರೂರಂ ಚ ಸೌಮ್ಯಂ ವಿದುಃ ।
ಮೇಷಾದ್ಯಾಃ ಕಥಿತಾಸ್ತ್ರಿಕೋಣಭವನಾತ್ ಪ್ರಾಗಾದಿನಾಥಾಃ ಕ್ರಮಾತ್
ಓಜರ್ಕ್ಷಂ ಸಮಭಂ ಪುಮಾಂಶ್ಚ ಯುವತಿರ್ವಾಮಾಂಗಮಸ್ತಾದಿಕಮ್॥ 26 ॥

ಮೇಷಾದಿ ಅನುಕ್ರಮವಾಗಿ ಪ್ರತಿ 3 ರಾಶಿಗಳು

ಚರ–ಸ್ಥಿರ–ಉಭಯ, ದ್ವಾರ–ಬಹಿಃ–ಗರ್ಭ, ಧಾತು–ಮೂಲ–ಜೀವ ಸಂಜ್ಞೆಗಳನ್ನು ಹೊಂದಿರುತ್ತವೆ. ಓಜಯುಗ್ಮರಾಶಿಗಳು ಕ್ರೂರ–ಸೌಮ್ಯ ಸಂಜ್ಞೆಯನ್ನೂ ಪುರುಷ–ಸ್ತ್ರೀ ಸಂಜ್ಞೆಯನ್ನೂ ಹೊಂದಿರುತ್ತವೆ. ಮೇಷ–ಸಿಂಹ–ಧನುಗಳು ಪೂರ್ವ ದಿಕ್ಕನ್ನೂ ವೃಷಭ–ಕನ್ಯಾ–ಮಕರಗಳು ದಕ್ಷಿಣದಿಕ್ಕನ್ನೂ ಮಿಥುನ–ತುಲಾ–ಕುಂಭಗಳು ಪಶ್ಚಿಮದಿಕ್ಕನ್ನೂ ಕರ್ಕಟಕ–ವೃಶ್ಚಿಕ–ಮೀನಗಳು ಉತ್ತರದಿಕ್ಕನ್ನೂ ಸೂಚಿಸುತ್ತವೆ.

## ॥ ತಿಥ್ಯಾದಿ ಸಂಜ್ಞೆಗಳು ॥

ನಂದಾ ಚ ಭದ್ರಾ ವಿಜಯಾ ಚ ರಿಕ್ತಾ
ಪೂರ್ಣೇತಿ ಸಂಜ್ಞಾಃ ಕ್ರಮಶಸ್ತಿಥೀನಾಮ್ ।
ಛಿದ್ರಾಭಿಧಾಸ್ತಾಸು ಭವಂತಿ ಭಾಸ್ವತ್
ವಸ್ವಂಗಸಂಖ್ಯಾಸ್ತಿಥಯಃ ಸರಿಕ್ತಾಃ ॥ 27 ॥

ತಿಥಿಗಳಿಗೆ ಪಾಡ್ಯದಿಂದ ಕ್ರಮವಾಗಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾ ಎಂದು ಸಂಜ್ಞೆಗಳು. 4, 6, 8, 9, 12, 14ನೆ ತಿಥಿಗಳಿಗೆ ಛಿದ್ರಾತಿಥಿಗಳೆಂದು ಹೆಸರು. (ಇವುಗಳಲ್ಲಿ 4, 9 ಮತ್ತು 14 ರಿಕ್ತಾತಿಥಿಗಳು).

ಬವಬಾಲವಕೌಲವತೈತಿಲಗರಜವಣಿಜ ವಿಷ್ಟಿ ನಾಮಾನಿ ।
ಚರಕರಣಾನಿ ವಿದುಃ ಶುಕ್ಲಪ್ರಥಮಾಂತ್ಯಾರ್ಧ ಪೂರ್ವಾಣಿ ॥ 28 ॥

ಶುಕ್ಲಪಕ್ಷದ ಪಾಡ್ಯದ ಉತ್ತರಾರ್ಧ ಮೊದಲುಗೊಂಡು ಬವಾದಿ 7 ಚರಕರಣಗಳು –ಬವ, ಬಾಲವ, ಕೌಲವ, ತೈತಿಲೆ, ಗರಜ, ವಣಿಜೆ, ವಿಷ್ಟಿ.

**ಸ್ಥಿರಕರಣಾನ್ಯಸಿತ ಚತುರ್ದಶ್ಯಪರಾರ್ಧಾದೀನಿ ಚತ್ವಾರಿ ।**
**ಪ್ರಾಹುಃ ಶಕುನಿ ಚತುಷ್ಪಾದ್ದ್ವಿರಸನ ಕಿಂಸ್ತುಘ್ನ ನಾಮಾನಿ ॥ 29 ॥**

ಕೃಷ್ಣಪಕ್ಷ ಚತುರ್ದಶೀ ಉತ್ತರಾರ್ಧ ಮೊದಲ್ಗೊಂಡು ಶಕುನಿ, ಚತುಷ್ಪಾತ್, ದ್ವಿರಸನ, ಕಿಂಸ್ತುಘ್ನ ಎಂದು 4 ಸ್ಥಿರಕರಣಗಳಿರುತ್ತವೆ.

**ತೇಷಾಂ ಸಿಂಹವ್ಯಾಘ್ರಕೋಲಾಃ ಖರೇಭೌ ।**
**ಗೌಃ ಶ್ವಾ ಚೇತ್ಥಂ ಯೋನಯಃ ಸಂಪ್ರದಿಷ್ಟಾಃ ॥ 30 ॥**

ಬವಾದಿ ಕರಣಗಳಿಗೆ ಸಿಂಹ, ವ್ಯಾಘ್ರ, ವರಾಹ, ಕತ್ತೆ, ಗಜ, ಪಶು, ನಾಯಿ ಮೃಗಗಳು.

## ॥ ನಕ್ಷತ್ರ ದೇವತೆಗಳು ॥

**ಭಾನಾಮಶ್ವಿಯಮಾಗ್ನಿಧಾತೃಶಶಿನೋ ರುದ್ರೋಽದಿತಿರ್ಗೀಷ್ಪತಿಃ**
**ಸರ್ಪಾಃ ಪಿತರೋಽರ್ಯಮಾ ಭಗರವೀ ತ್ವಷ್ಟಾಶುಗೇಂದ್ರಾಗ್ನಯಃ ।**
**ಮಿತ್ರೇಂದ್ರೌ ನಿಋತಿಃ ಪಯೋದಕುಸುಮಂ ವಿಶ್ವೇ ಮುಕುಂದೋ ವಸು–**
**ಕ್ಷೀರೇಶಾವಜ ಏಕಪಾತ್ ಪುನರಹಿರ್ಬುಧ್ನ್ಯಶ್ಚ ಪೂಷಾಽಧಿಪಾಃ ॥ 31 ॥**

ಅಶ್ವಿನ್ಯಾದಿಗಳಿಗೆ ಕ್ರಮವಾಗಿ –ಅಶ್ವಿನೀದೇವತೆಗಳು, ಯಮ, ಅಗ್ನಿ, ಬ್ರಹ್ಮ, ಚಂದ್ರ, ರುದ್ರ, ಅದಿತಿ, ಗುರು, ಸರ್ಪ, ಪಿತೃ, ಅರ್ಯಮಾ, ಭಗ, ರವಿ, ತ್ವಷ್ಟ್ರ, ವಾಯು, ಇಂದ್ರಾಗ್ನಿ, ಮಿತ್ರ, ಇಂದ್ರ, ನಿರ್ಋತಿ, ಜಲ, ವಿಶ್ವೇದೇವತೆಗಳು, ವಿಷ್ಣು, ವಸು, ವರುಣ, ಅಜ ಏಕಪಾತ್, ಅಹಿರ್ಬುಧ್ನ್ಯ, ಪೂಷಾ –ದೇವತೆಗಳಾಗಿರುತ್ತಾರೆ.

## ॥ ತಿಥಿದೇವತೆಗಳು ॥

**ಕಮಲಜವಿಧಾತೃಹರಿಯಮಶಶಾಂಕಷಡ್ವಕ್ತ್ರಶಕ್ರವಸುಭುಜಗಾಃ ।**
**ಧರ್ಮೇಶಸವಿತೃಮನ್ಮಥಕಲಯೋ ವಿಶ್ವೇ ಚ ತಿಥಿಪತಯಃ ॥ 32 ॥**

**ಪಿತರೋಽಮಾವಾಸ್ಯಾಯಾಂ ಸಂಜ್ಞಾ–**
**ಸದೃಶಾಶ್ಚ ತೈಃ ಕ್ರಿಯಾಃ ಕಾರ್ಯಾಃ ॥ 33 ॥**

ಪಾಡ್ಯ ಮೊದಲುಗೊಂಡು ಬ್ರಹ್ಮ, ವಿಷ್ಣು, ಯಮ, ಚಂದ್ರ, ಸುಬ್ರಹ್ಮಣ್ಯ, ಇಂದ್ರ, ವಸು, ನಾಗ, ಧರ್ಮ, ಈಶ್ವರ, ಸವಿತೃ, ಮನ್ಮಥ, ಕಲಿ, ವಿಶ್ವೇದೇವತೆಗಳು ಮತ್ತು ಪಿತೃದೇವತೆಗಳು. ಆಯಾ ದೇವತೆಗೆ ಅನುಗುಣವಾದ ಕಾರ್ಯಗಳನ್ನು ಆಯಾ ತಿಥಿಗಳಲ್ಲಿ ನಡೆಸಬೇಕು.

## ॥ ಪಕ್ಷಾಂತರ ॥

ಕ್ರಮಾತ್ತಿಥೀನಾಂ ಪತಯೋಽಗ್ನಿಧಾತೃ
ಗೌರೀಗಣೇಶಾಹಿಗುಹಾರ್ಕರುದ್ರಾಃ ।
ದುರ್ಗಾರ್ಕಿ ವಿಶ್ವೇ ಹರಿಮನ್ಮಥೇಶಾಃ
ಸೋಮಃ ಕ್ರಮಾತ್ ಸ್ಯುಃ ಪಿತರಸ್ತ್ವಮಾಯಾಮ್ ॥ 34 ॥

ಅಗ್ನಿ, ಬ್ರಹ್ಮ, ಗೌರಿ, ಗಣಪತಿ, ನಾಗ, ಸುಬ್ರಹ್ಮಣ್ಯ, ರವಿ, ರುದ್ರ, ದುರ್ಗೆ, ಯಮ, ವಿಶ್ವೇದೇವತೆಗಳು, ವಿಷ್ಣು, ಮನ್ಮಥ, ಶಿವ, ಸೋಮ ಮತ್ತು ಅಮಾವಾಸ್ಯೆಗೆ ಪಿತೃಗಳು ಕ್ರಮವಾಗಿ ತಿಥಿದೇವತೆಗಳಾಗಿರುತ್ತಾರೆ

## ॥ ಕರಣದೇವತೆಗಳು ॥

ಬವಬಾಲವಕೌಲವತೈತಿಲಾಖ್ಯಗರವಣಿಜವಿಷ್ಟಿಸಂಜ್ಞಾನಾಮ್ ।
ಪತಯಃ ಸ್ಯುರಿಂದ್ರಕಮಲಜಮಿತ್ರಾರ್ಯಮಭೂಶ್ರಿಯಃ ಸಯಮಾಃ ॥ 35 ॥

ಬವ, ಬಾಲವ, ಕೌಲವ, ತೈತಿಲೆ, ಗರಿಜೆ, ವಣಿಜೆ, ವಿಷ್ಟಿ –ಈ 7 ಕರಣಗಳಿಗೆ ಕ್ರಮವಾಗಿ ಇಂದ್ರ, ಬ್ರಹ್ಮ, ಮಿತ್ರ, ಅರ್ಯಮ, ಭೂದೇವಿ, ಶ್ರೀದೇವಿ, ಯಮ ದೇವತೆಗಳಾಗಿರುತ್ತಾರೆ.

ಕೃಷ್ಣಚತುರ್ದಶ್ಯರ್ಧಾದ್ಧ್ರುವಾಣಿ ಶಕುನಿಶ್ಚತುಷ್ಪದಂ ನಾಗಮ್ ।
ಕಿಂಸ್ತುಘ್ನಮಿತಿ ಚ ತೇಷಾಂ ಕಲಿವೃಷಫಣಿಮಾರುತಾಃ ಪತಯಃ ॥ 36 ॥

ಕೃಷ್ಣಚತುರ್ದಶಿಯ ಉತ್ತರಾರ್ಧದಿಂದ ಪ್ರಾರಂಭವಾಗುವ 4 ಸ್ಥಿರ ಕರಣಗಳು –ಶಕುನಿ, ಚತುಷ್ಪದ, ನಾಗ, ಕಿಂಸ್ತುಘ್ನ. ಇವುಗಳಿಗೆ ಕ್ರಮವಾಗಿ ಕಲಿ, ವೃಷ, ನಾಗ, ಮಾರುತರು ಪತಿಗಳಾಗಿರುತ್ತಾರೆ

## ॥ ವಿಷ್ಕಂಭಾದಿ ಯೋಗದೇವತೆಗಳು ॥

ಸಪ್ತವಿಂಶತಿಸಂಖ್ಯಾಕ ನಿತ್ಯಯೋಗಾಧಿದೇವತಾಃ ।
ಶಾಸ್ತಾ ಪುಷ್ಟಿರ್ಧೃತಿಃ ಕೀರ್ತಿರ್ದೀಪ್ತಿರ್ವೇತಾಳಋದ್ಧಯಃ ॥ 37 ॥

ಶ್ರೀಃ ಕಾಲರಾತ್ರಿರ್ಮಹಾಕಾಲೋ ಜಯಂತೋ ಭೂಮಿದೇವತಾ ।
ಮಹಾರುದ್ರಸ್ತಥಾ ದುರ್ಗಾ ತ್ವಷ್ಟಾ ಪಂಚದಶಾಹ್ವಯಃ ॥ 38 ॥

ವೀರಸಾಮಾ ವಸುರ್ಯಕ್ಷೋ ರುದ್ರಃ ಕೃಷ್ಣೋ ಮಹೇಶ್ವರಃ ।
ಕಾಮೋ ವಿಘ್ನೇಶ್ವರೋ ಬ್ರಹ್ಮಾ ಪ್ರಜೇಶೋ ವರುಣೋ ಯಮಃ ॥ 39 ॥

ವಿಷ್ಕಂಭಾದಿ 27 ಯೋಗಗಳಿಗೆ ಕ್ರಮವಾಗಿ –ಶಾಸ್ತಾ, ಪುಷ್ಟಿ, ಧೃತಿ, ಕೀರ್ತಿ, ದೀಪ್ತಿ, ವೇತಾಳ, ಋದ್ಧಿ, ಲಕ್ಷ್ಮಿ ಕಾಲರಾತ್ರಿ, ಮಹಾಕಾಲ, ಜಯಂತ, ಭೂಮಿ, ಮಹಾರುದ್ರ, ದುರ್ಗೆ, ತ್ವಷ್ಟ, ವೀರಸಾಮ, ವಸು, ಯಕ್ಷ, ರುದ್ರ, ಕೃಷ್ಣ,

ಮಹೇಶ್ವರ, ಕಾಮ, ವಿಘ್ನೇಶ್ವರ, ಬ್ರಹ್ಮ, ಪ್ರಜೇಶ, ವರುಣ ಮತ್ತು ಯಮ ಅಧಿದೇವತೆಗಳು.

## ॥ ಜನ್ಮಾದಿ ನಕ್ಷತ್ರಗಳ ಅಧಿಪತಿಗಳು ॥

ಜನ್ಮನ್ಯರ್ಕೋ ಹಿಮಕರಸುತಃ ಸೈಂಹಿಕೇಯಃ ಸುರೇಜ್ಯಃ
ಕೇತುಶ್ಚಂದ್ರೋ ದಿನಕರಸುತೋ ಭಾರ್ಗವೋ ಭೂಮಿಪುತ್ರಃ ।
ತಾಪಂ ಕಾಂತಿಂ ಕ್ಷತಿಧೃತಿಲಯಾನ್ ಕೀರ್ತಿಹಾನಿಪ್ರಮೋದಾನ್
ಮೃತ್ಯುಂ ತಾರಾಬಲಮನುದಿನಂ ತೇ ದಿಶಂತಿ ಕ್ರಮೇಣ ॥ 40 ॥

ಜನ್ಮ ಅನುಜನ್ಮ ತ್ರಿಜನ್ಮಗಳಿಂದ ಕ್ರಮವಾಗಿ ರವಿ, ಬುಧ, ರಾಹು, ಗುರು, ಕೇತು, ಚಂದ್ರ, ಶನಿ, ಶುಕ್ರ, ಕುಜ –ಈ ಗ್ರಹಗಳು ಅಧಿಪತಿಗಳಾಗಿರುತ್ತಾರೆ. ಇವರು ಕ್ರಮವಾಗಿ ತಾಪ, ಕಾಂತಿ, ಅಪಘಾತ, ಧೈರ್ಯ, ನಾಶ, ಕೀರ್ತಿ, ಹಾನಿ, ಸಂತೋಷ, ಮೃತ್ಯು ಈ ಫಲಗಳನ್ನು ಕೊಡುತ್ತಾರೆ.

## ॥ ಪಂಚಾಂಗಗಳ ವಿವರಣೆ ॥

ನಕ್ಷತ್ರವಾರತಿಥಯಃ ಕರಣಾನಿ ಯೋಗಾಃ
ಪಂಚಾಂಗಮೇತದಥ ರಾಶಿಯುತಂ ಷಡಂಗಮ್ ।
ಸಪ್ತಾಂಗಮಿತ್ಯಭಿಹಿತಂ ಗ್ರಹಯುಕ್ತಮೇತತ್
ವರ್ಗೋತ್ತಮೋ ನಿಜನಿಜೇ ಭವನೇ ನವಾಂಶಃ ॥ 41 ॥

ನಕ್ಷತ್ರ ವಾರ ತಿಥಿ ಯೋಗ ಕರಣಗಳಿಗೆ ಪಂಚಾಂಗವೆಂದು ಹೆಸರು ರಾಶಿಯನ್ನು ಸೇರಿಸಿದರೆ ಷಡಂಗ. ಗ್ರಹಯುಕ್ತವಾದರೆ ಸಪ್ತಾಂಗ. ಯಾವ ರಾಶಿಯಾದರೂ ಅದೇ ನವಾಂಶಕದಲ್ಲಿದ್ದರೆ ಅದಕ್ಕೆ ವರ್ಗೋತ್ತಮವೆಂದು ಹೆಸರು.

## ॥ ದ್ವಿಪಾದಾದಿ ಸಂಜ್ಞೆ ॥

ಕನ್ಯಾಹಯಾರ್ಧಯಮತೌಲಿಘಟಾ ದ್ವಿಪಾದಃ
ತೋಯಾಶ್ರಯಾ ಝುಷಕುಲೀರ ಮೃಗಾಂತ್ಯಭಾಗಾಃ ।
ಪೂರ್ವಾಪರೇ ಮೃಗಹಯಾಂಗದಲೇ ಮೃಗೇಂದ್ರೋ
ಮೇಷೋ ವೃಷಶ್ಚ ಪಶವಶ್ಚತುರಂಘ್ರಿಸಂಜ್ಞಾಃ ॥ 42 ॥

ಕನ್ಯಾ, ಧನುವಿನ ಪೂರ್ವಾರ್ಧ; ಮಿಥುನ, ತುಲಾ, ಕುಂಭಗಳು ದ್ವಿಪಾದ್ರಾಶಿಗಳು. ಕರ್ಕಟಕ, ಮಕರರಾಶಿಯ ಉತ್ತರಾರ್ಧ, ಮೀನ ಇವು ಜಲರಾಶಿಗಳು. ಮಕರದ ಪೂರ್ವಾರ್ಧ, ಧನುವಿನ ಉತ್ತರಾರ್ಧ, ಸಿಂಹ ಮೇಷ ವೃಷಭಗಳು ಚತುಷ್ಪಾದ್ರಾಶಿಗಳು.

## ॥ ವರ್ಣವೇದ ದಿಕ್‌ಸಂಜ್ಞೆಗಳು ॥

ವಿಪ್ರಾಧ್ವಯೌ ಗುರುಸಿತೌ ನೃಪತೀ ಕುಜಾರ್ಕೌ
ವೈಶ್ಯಃ ಶಶೀ ಶಶಿಸುತೋ ವೃಷಲೋಽರ್ಕಜೋಽಂತ್ಯಃ ।
ವೇದಾಧಿಪಾ ಗುರುಸಿತಾರಬುಧಾ ದಿಗೀಶಾಃ
ಭಾಸ್ವತ್ಸಿತಾರಫಣಿಮಂದಶಶಿಜ್ಞಜೀವಾಃ ॥ 43 ॥

ಗುರುಶುಕ್ರರು ಬ್ರಾಹ್ಮಣರು ರವಿಕುಜರು ಕ್ಷತ್ರಿಯರು, ಚಂದ್ರನು ವೈಶ್ಯ, ಬುಧನು ಶೂದ್ರ, ಶನಿ ಅಂತ್ಯಜ. ಋಗ್ವೇದಾದಿ 4 ವೇದಗಳಿಗೆ ಗುರು ಶುಕ್ರ ಕುಜ ಬುಧರು ಅಧಿಪತಿಗಳು. ರವಿ, ಶುಕ್ರ, ಕುಜ, ರಾಹು, ಶನಿ, ಚಂದ್ರ, ಬುಧ, ಗುರು –ಇವರು ಕ್ರಮವಾಗಿ 8 ದಿಕ್ಕುಗಳ ಅಧಿಪತಿಗಳು.

ಜ್ಞೇಯಾವಿಂದುಕವೀ ಸ್ತ್ರಿಯೌ ಶನಿಬುಧೌ ಕ್ಲೀಬೌ ಪುಮಾಂಸಃ ಪರೇ
ಸಂಜ್ಞಾಃ ಕಾಶ್ಚನ ಪೂರ್ವ ಶಾಸ್ತ್ರಗದಿತಾಃ ಸಂಕ್ಷೇಪತೋ ದರ್ಶಿತಾಃ ।
ಅಸ್ಮಿನ್ ರೂಪವಪುಃ ಪ್ರಮಾಣ ಸಗುಣದ್ರವ್ಯ ಸ್ವಭಾವಾದಯಃ
ಕಥ್ಯಂತೇ ಸಗ್ರಹಗ್ರಹಸ್ಯ ನ ಮಯಾ ಹ್ಯನ್ಯತ್ರ ತದ್ವಿಸ್ತರಃ ॥ 44 ॥

ಚಂದ್ರಶುಕ್ರರು ಸ್ತ್ರೀಗ್ರಹಗಳು, ಬುಧಶನಿಗಳು ನಪುಂಸಕರು, ರವಿಕುಜಗುರುಗಳು ಪುರುಷಗ್ರಹಗಳು.

ಕೆಲವು ಸಂಜ್ಞೆಗಳನ್ನು ಇದುವರೆಗೆ ತಿಳಿಸಿದೆ. ಪ್ರತಿಯೊಂದು ಗ್ರಹ, ರಾಶಿ, ನಕ್ಷತ್ರಗಳಿಗೆ ರೂಪ, ಪ್ರಾಯ, ಸಂಖ್ಯೆ, ದ್ರವ್ಯ ಸ್ವಭಾವಾದಿಗಳು ಅನೇಕವಿವೆ. ಇದೆಲ್ಲವನ್ನು ಚಿಂತಿಸಿ ಮುಹೂರ್ತ ನಿರ್ಣಯಿಸಬೇಕು. ದ್ವಿಪಾದ್ರಾಶಿಗಳು ವಿವಾಹಕ್ಕೆ ಶುಭ. ಸ್ಥಿರರಾಶಿಗಳು ಗೃಹಪ್ರವೇಶಕ್ಕೆ ಶುಭ. ಜಲರಾಶಿಗಳು ಕೂಪನಿರ್ಮಾಣಾದಿಗಳಿಗೆ ಶುಭ. ವೇದಾಧಿಪಬಲವರ್ಗ ಯೋಗದೃಷ್ಟಿ ವಾರ ಆಯಾ ಶಾಖೆಯವರಿಗೆ ಉಪನಯನಕ್ಕೆ ಶುಭ. ಪುಂನಕ್ಷತ್ರಗಳು ಪುಂಸವನಾದಿಗಳಿಗೆ ಶುಭ ಆಯಾ ನಕ್ಷತ್ರ ತಿಥಿ ಮೊದಲಾದವುಗಳ ದೇವತೆಗಳನ್ನು ತಿಳಿದುಕೊಂಡು ಆ ದೇವತಾ ಸೇವಾದಿಗಳನ್ನು ಆಯಾ ನಕ್ಷತ್ರ–ತಿಥಿ ಮೊದಲಾದವುಗಳಲ್ಲಿ ಮಾಡತಕ್ಕದ್ದು. ಇದನ್ನು ಇತರ ಶಾಸ್ತ್ರಗ್ರಂಥಗಳಲ್ಲಿ ಬಹು ವಿಸ್ತಾರವಾಗಿ ತಿಳಿಸಿರುತ್ತಾರೆ.

## ॥ ಮಾಂದ್ಯಾದಿ ಉಪಗ್ರಹಗಳ ವಿಚಾರ ॥

ಚರಂ ರುದ್ರದಾಸ್ಯಂ ಘಟಂ ನಿತ್ಯತಾನಂ
ಖನಿರ್ಮಾಂದಿನಾಡ್ಯಃ ಕ್ರಮೇಣಾರ್ಕವಾರಾತ್ ।
ಅಹರ್ಮಾನ ವೃದ್ಧಿಕ್ಷಯೌ ತತ್ರ ಕಾರ್ಯೌ
ನಿಶಾಯಾಂ ತು ವಾರೇಶ್ವರಾತ್ ಪಂಚಮಾದ್ಯಾಃ ॥ 45 ॥

ಆದಿತ್ಯವಾರದಿಂದ ಕ್ರಮವಾಗಿ, ಮಾಂದ್ಯುದಯಕಾಲ 26, 22, 18, 14, 10, 6, 2 ಗಳಿಗೆಗೆ ಆಗಿರುತ್ತದೆ. ರಾತ್ರಿ ಮಾಂದಿ 5ನೆ ವಾರದ ಮಾಂದಿಯಾಗಿರುತ್ತಾನೆ. ದಿವಾರಾತ್ರಿ ಮಾನಗಳ ವ್ಯತ್ಯಾಸ ಬಂದಾಗ ತ್ರೈರಾಶಿಕಗಣಿತದಿಂದ ಸಮಯ ನಿಷ್ಕರ್ಷಿಸಬೇಕು.

ದಿವ್ಯಾ ಘಟೀ ನಿತ್ಯತನುಃ ಖನೀನಾಂ
ಚಂದ್ರೇರುರುಃ ಸ್ಯಾದ್ಯಮಕಂಟಕಸ್ಯ ।
ಅರ್ಧಪ್ರಹಾರಸ್ಯ ಭಟೋನಟೀನ
ಸ್ತನೌ ಖನೀ ಚಂದ್ರ ಖರೌ ಜಯಜ್ಞಃ ॥ 46 ॥

ಯಮಕಂಟಕನಿಗೆ ಉದಯಕಾಲ ಕ್ರಮವಾಗಿ –18, 14, 10, 6, 2, 26, 22. ಅರ್ಧ ಪ್ರಹಾರನ ಕಾಲ ಕ್ರಮವಾಗಿ 14, 10, 6, 2, 26, 22, 18 ಗಳಿಗೆ.

ಕಾಲಸ್ಯ ಘೇನಂ ತನುರುದ್ರದಿವ್ಯಂ
ವಂದ್ಯೋ ನಟಸ್ತೈರನು ಸೂರ್ಯವಾರಾತ್ ।
ಏಷಾಂ ಸಮಂ ಮಾಂದಿವದೇವ ತತ್ತ–
ನ್ನಾಡ್ಯಾ ಸ್ಫುಟಂ ಲಗ್ನವದತ್ರ ಸಾಧ್ಯಮ್ ॥ 47 ॥

ಕಾಲನ ಕಾಲ ಕ್ರಮವಾಗಿ 2, 26, 22, 18, 14, 10 ಮತ್ತು 6 ಮಾಂದಿಗೆ ಮಾಡಿದ ಹಾಗೆ ಇದೆಲ್ಲದರ ಸಮಯವನ್ನು ನಿಷ್ಕರ್ಷಿಸಬೇಕು ಲಗ್ನಸ್ಫುಟದ ಪ್ರಕ್ರಿಯೆಯಂತೆಯೇ ಮಾಂದ್ಯಾದಿ ಸ್ಫುಟಗಳನ್ನು ಕಂಡುಕೊಳ್ಳಬೇಕು.

ನಾನಾಲೋಕವಿದನ್ವಿತೋ ದಿನಕರೋ ಧೂಮಾಹ್ವಯೋ ಮಂಡಲಾತ್
ಶುದ್ಧೇಽಸ್ಮಿನ್ ವ್ಯತಿಪಾತಕೋಽತ್ರ ಭಗಣಾರ್ಧಾಢ್ಯೇ ಪರೀವೇಷಕಃ ।
ತಸ್ಮಿನ್ಮಂಡಲಶೋಧಿತೇ ಖಲು ಭವೇದ್ಯೆಂದ್ರಂ ಧನುಸ್ತತ್ರ ತು
ಜ್ಞಾನೌತ್ಸುಕ್ಯಯುತೇ ತು ಕೇತುರುದಿತಸ್ತತ್ರೈಕಭಾಢ್ಯೇ ರವಿಃ ॥ 48 ॥

ರವಿಸ್ಫುಟಕ್ಕೆ 4-13-0 ಸೇರಿಸಿದರೆ ಧೂಮಸ್ಫುಟ ಬರುತ್ತದೆ. ಅದನ್ನು 12 ರಾಶಿಯಿಂದ ಕಳೆದರೆ ವ್ಯತೀಪಾತ. ಅದಕ್ಕೆ 6 ರಾಶಿ ಸೇರಿಸಿದರೆ ಪರಿವೇಷ. ಅದನ್ನು 12 ರಾಶಿಯಿಂದ ಕಳೆದರೆ ಇಂದ್ರಧನುಸ್. ಅದಕ್ಕೆ 0-17-0 ಸೇರಿಸಿದರೆ ಕೇತು. ಅದಕ್ಕೆ 1 ಸೇರಿಸಿದರೆ ಮೊದಲಿನ ರವಿಸ್ಫುಟ ಬರುತ್ತದೆ.

## ॥ ಚಂದ್ರಕ್ರಿಯಾದಿಗಳು ॥

ಜಾತಕೇ ಚ ಮುಹೂರ್ತೇ ಚ ಪ್ರಶ್ನೇ ಚಂದ್ರಕ್ರಿಯಾದಯಃ ।
ಸಮ್ಯಕ್ ಫಲಪ್ರದಾಸ್ತೇಷಾಂ ವಿಶೇಷೇಣ ವಿಚಿಂತಯೇತ್ ॥ 49 ॥

ಜಾತಕ ಮುಹೂರ್ತ, ಪ್ರಶ್ನೆಗಳಲ್ಲಿ ಚಂದ್ರಕ್ರಿಯಾ ಅವಸ್ಥಾ ವೇಲೆಗಳು ಬಹಳವಾಗಿ ಫಲಪ್ರದವಾಗಿರುತ್ತವೆ.

ಜನ್ಮರ್ಕ್ಷವಿಘಟೀಂ ನೀತ್ವೈಜ್ಞಾರ್ನಾಂಗೈರ್ನನಯೈರ್ಭಜೇತ್ ।
ಲಬ್ಧಾಶ್ಚಂದ್ರಕ್ರಿಯಾವಸ್ಥಾವೇಲಾಖ್ಯಾಸ್ತತ್ಫಲಂ ಕ್ರಮಾತ್ ॥ 50 ॥

ಚಂದ್ರನ ನಕ್ಷತ್ರಗತ ವಿಘಟಿಗಳನ್ನು 60ರಿಂದ, 300ರಿಂದ ಮತ್ತು 100ರಿಂದ ಭಾಗಿಸಿದಾಗ ಬಂದ ಲಬ್ಧವು ಕ್ರಮವಾಗಿ ಚಂದ್ರಕ್ರಿಯಾ, ಚಂದ್ರಾವಸ್ಥಾ ಮತ್ತು ಚಂದ್ರವೇಲಾ ಆಗಿರುತ್ತದೆ

ಸ್ಥಾನಾದ್ಭ್ರಷ್ಟಸ್ತಪಸ್ವೀ ಪರಯುವತಿರತೋ ದ್ಯೂತಕೃದ್ಧಸ್ತಿಮುಖ್ಯಾ-
ರೂಢಃ ಸಿಂಹಾಸನಸ್ಥೋ ನರಪತಿರರಿಹಾ ದಂಡನೇತಾ ಗುಣೀ ಚ ।
ನಿಷ್ಪ್ರಾಣಶ್ಛಿನ್ನಮೂರ್ಧಾ ಕ್ಷತಕರಚರಣೋ ಬಂಧನಸ್ಥೋ ವಿನಷ್ಟೋ
ರಾಜಾ ವೇದಾನಧೀತೇ ಸ್ವಪಿತಿ ಸುಚರಿತಃ ಸಂಸ್ಮೃತೋ ಧರ್ಮಕರ್ತಾ ॥
॥ 51 ॥

ಸದ್ವಂಶ್ಯೋ ನಿಧಿಸಂಗತಃ ಶ್ರುತಕುಲೋ ವ್ಯಾಖ್ಯಾಪರಃ ಶತ್ರುಹಾ
ರೋಗೀ ಶತ್ರುಜಿತಃ ಸ್ವದೇಶಚಲಿತೋ ಭೃತ್ಯೋ ವಿನಷ್ಟಾರ್ಥಕಃ ।
ಆಸ್ಥಾನೀ ಚ ಸುಮಂತ್ರಕಃ ಪರಮಹೀಭರ್ತಾ ಸಭಾರ್ಯೋ ಗಜ-
ತ್ರಸ್ತಃ ಸಂಯುಗಭೀತಿಮಾನತಿಭಯೋ ಲೀನೋಽನ್ನದಾತಾಗ್ನಿಗಃ ॥ 52 ॥

ಕ್ಷುದ್ಬಾಧಾಸಹಿತೋಽನ್ನಮತ್ತಿ ವಿಚರನ್ಮಾಂಸಾಶನೋಽಸ್ತ್ರಕ್ಷತಃ
ಸೋದ್ವಾಹೋ ಧೃತಕಂದುಕೋ ವಿಹರತಿ ದ್ಯೂತೈರ್ನೃಪೋ ದುಃಖಿತಃ ।
ಶಯ್ಯಾಸ್ಥೋ ರಿಪುಸೇವಿತಶ್ಚ ಸಸುಹೃದ್ಯೋಗೀ ಚ ಭಾರ್ಯಾನ್ವಿತೋ
ಮಿಷ್ಟಾಶೀ ಚ ಪಯಃ ಪಿಬನ್ ಸುಕೃತಕೃತ್ ಸ್ವಸ್ಥಸ್ತಥಾಽಽಸ್ತೇ ಸುಖಮ್ ॥
॥ 53 ॥

ಚಂದ್ರಕ್ರಿಯಾ ಫಲಗಳು ಕ್ರಮವಾಗಿ- 1. ಸ್ಥಾನಭ್ರಷ್ಟ, 2. ತಪಸ್ವಿ, 3. ಪರಸ್ತ್ರೀಯರಲ್ಲಿ ಆಸಕ್ತ, 4. ಜೂಜಾಡುವುದು, 5 ಆನೆಸವಾರಿ, 6. ಸಿಂಹಾಸನದಲ್ಲಿ ಕುಳಿತವನು, 7 ರಾಜ, 8. ಶತ್ರುಗಳನ್ನು, ನಾಶಮಾಡುವವನು, 9. ಸೈನ್ಯಾಧಿಪತಿ, 10. ಸದ್ಗುಣಿ, 11 ನಿರ್ಜೀವ, 12 ಒಡೆದ ತಲೆಯುಳ್ಳವನು, 13. ಗಾಯಗೊಂಡ ಕೈಕಾಲುಳ್ಳವನು, 14 ಬಂಧನ, 15. ನಷ್ಟ, 16 ರಾಜ, 17. ವೇದಾಧ್ಯಯನ, 18. ನಿದ್ರೆ, 19 ಸಚ್ಚಾರಿತ್ರ್ಯ, 20. ಧಾರ್ಮಿಕ ಕಾರ್ಯ, 21. ಉತ್ತಮ ವಂಶದವನು, 22 ನಿಧಿ ಹೊಂದುವವನು, 23. ಪ್ರಸಿದ್ಧ ಕುಲದವನು, 24. ವಾಕ್‌ಪ್ರೌಢಿಮೆ ಉಳ್ಳವನು, 25. ಶತ್ರುಗಳನ್ನು ಜಯಿಸುವವನು, 26 ರೋಗಿ, 27 ಶತ್ರುಗಳಿಂದ ಸೋತವನು, 28. ತನ್ನ ಊರನ್ನು ಬಿಟ್ಟವನು, 29. ಸೇವಕ, 30 ಧನಹೀನನು, 31. ಆಸ್ಥಾನಿಕ, 32. ಚಿಂತಕ, 33. ಪರರ ಭೂಮಿಯ ಒಡೆತನ, 34. ಪತ್ನೀಯುಕ್ತನು, 35. ಆನೆಗಳಿಂದ ಭಯಪೀಡಿತ, 36. ಕಲಹಗಳಲ್ಲಿ ಭಯ ಉಳ್ಳವನು, 37 ಅತಿಭಯವುಳ್ಳವನು, 38 ಅಡಗಿಕೊಂಡವನು, 39 ಅನ್ನದಾತೃ, 40. ಅಗ್ನಿಭಯ, 41. ಹಸಿವಿನಿಂದ ಪೀಡಿತನು, 42. ಆಹಾರ ತಿನ್ನುವವನು, 43. ಸಂಚಾರಶೀಲನು, 44. ಮಾಂಸಾಹಾರಿ, 45. ಶಸ್ತ್ರದಿಂದ

ಗಾಯ, 46. ವಿವಾಹ, 47 ಚೆಂಡಾಟ, 48 ಜೂಜು, 49 ರಾಜ, 50. ದುಃಖಿತ, 51. ಹಾಸಿಗೆಯಲ್ಲಿ ಮಲಗಿದವನು, 52 ಶತ್ರುಗಳಿಂದ ಸೇವಿಸಲ್ಪಟ್ಟವನು, 53 ಮಿತ್ರರಿಂದ ಯುಕ್ತ, 54. ಯೋಗಿ, 55. ಪತ್ನೀಯುಕ್ತ, 56. ಮೃಷ್ಟಾನ್ನಭೋಜನ, 57. ಹಾಲು ಕುಡಿಯುತ್ತಿರುವವನು, 58 ಪುಣ್ಯಕಾರ್ಯಶೀಲ, 59. ಸ್ವಸ್ಥ, 60 ಸುಖಿ

## ।। ಚಂದ್ರಾವಸ್ಥಾಫಲ ।।

ಆತ್ಮಸ್ಥಾನಾತ್ ಪ್ರವಾಸೋ ಮಹಿತನೃಪಪದಾಸಕ್ತತಾ ಪ್ರಾಣಹಾನಿ–
ರ್ಭೂಪಾಲತ್ವಂ ಸ್ವವಂಶೋಚಿತಗುಣನಿರತೋ ರೋಗ ಆಸ್ಥಾನಗತ್ವಮ್ ।
ಭೀತಿಃ ಕ್ಷುದ್ಬಾಧಿತತ್ವಂ ಯುವತಿಪರಿಣಯೋ ರಮ್ಯಶಯ್ಯಾನುಷಕ್ತಿಂ
ಮೃಷ್ಟಾಶಿತ್ವಂ ಚ ಗೀತಾ ಇತಿ ನಿಯಮವಶಾತ್ ಸದ್ಭಿರಿಂದೋರವಸ್ಥಾ ।। 54 ।।

ಚಂದ್ರಾವಸ್ಥಾ ಫಲಗಳು ಕ್ರಮವಾಗಿ –1. ಸ್ವಸ್ಥಾನದಿಂದ ಪ್ರವಾಸ, 2 ಅರಸನ ಸಾಮೀಪ್ಯ, 3 ಪ್ರಾಣಹಾನಿ, 4 ರಾಜತ್ವ, 5. ವಂಶೋಚಿತ ಗುಣನಿರತತೆ, 6 ರೋಗ, 7. ಆಸ್ಥಾನಿಕ, 8 ಭಯ, 9 ಹಸಿವಿನಿಂದ ಪೀಡೆ, 10. ಯುವತಿಯೊಂದಿಗೆ ವಿವಾಹ, 11. ಸುಂದರ ಹಾಸಿಗೆಯಲ್ಲಿ ಆಸೆ, 12. ಮೃಷ್ಟಾನ್ನಭೋಜನ.

## ।। ಚಂದ್ರವೇಲಾ ಫಲ ।।

ಮೂರ್ಧಾಮಯೋ ಮುದಿತತಾ ಯಜನಂ ಸುಖಿಸ್ತೋ
ನೇತ್ರಾಮಯಃ ಸುಖಿತತಾ ವನಿತಾವಿಹಾರಃ ।
ಉಗ್ರಜ್ವರಃ ಕನಕಭೂಷಣಮಶ್ರುಮೋಕ್ಷಃ
ಕ್ಷ್ವೇಲಾಶನಂ ನಿಧುವನಂ ಜಠರಸ್ಯ ರೋಗಃ ।। 55 ।।

ಕ್ರೀಡಾಜಲೇ ಹಸನಚಿತ್ರವಿಲೇಖನೇ ಚ
ಕ್ರೋಧಶ್ಚ ನೃತ್ತಕರಣಂ ಘೃತಭುಕ್ತನಿದ್ರೇ ।
ದಾನಕ್ರಿಯಾ ದಶನರುಕ್ ಕಲಹಃ ಪ್ರಯಾಣ–
ಮುನ್ಮತ್ತತಾ ಚ ಸಲಿಲಾಪ್ಲವನಂ ವಿರೋಧಃ ।। 56 ।।

ಸ್ವೇಚ್ಛಾಸ್ಥಾನಂ ಕ್ಷುದ್ಭಯಂ ಶಾಸ್ತ್ರಲಾಭಂ
ಸ್ವೈರಂ ಗೋಷ್ಠೀ ಯೋಧನಂ ಪುಣ್ಯಕರ್ಮ ।
ಪಾಪಾಚಾರಃ ಕ್ರೂರಕರ್ಮಾ ಪ್ರಹರ್ಷಃ
ಪ್ರಾಜ್ಞೈರೇವಂ ಚಂದ್ರವೇಲಾ ಪ್ರದಿಷ್ಟಾ ।। 57 ।।

ಚಂದ್ರವೇಲಾ ಫಲಗಳು ಕ್ರಮವಾಗಿ –1. ತಲೆನೋವು, 2 ಸಂತೋಷ, 3 ಯಜ್ಞ, 4. ಸುಖಿ, 5. ನೇತ್ರರೋಗ, 6 ನೆಮ್ಮದಿ, 7. ಸ್ತ್ರೀಯೊಂದಿಗೆ ವಿಹಾರ, 8. ತೀವ್ರಜ್ವರ, 9. ಚಿನ್ನದ ಆಭರಣಗಳು, 10. ಕಣ್ಣೀರು, 11 ವಿಷವಸ್ತು ಸೇವನೆ,

12. ರತಿಕ್ರೀಡೆ, 13. ಜಠರವ್ಯಾಧಿ, 14. ಜಲಕ್ರೀಡೆ, 15. ಹಾಸ್ಯ, 16. ಚಿತ್ರಲೇಖನ, 17. ಕೋಪ, 18. ನೃತ್ಯ, 19. ತುಪ್ಪದ ಊಟ, 20. ನಿದ್ರೆ, 21. ದಾನಕ್ರಿಯೆ, 22. ಹಲ್ಲುನೋವು, 23 ಕಲಹ, 24. ಪ್ರಯಾಣ, 25. ಉನ್ಮತ್ತತೆ, 26. ನೀರಿನಲ್ಲಿ ಮುಳುಗುವುದು, 27. ವಿರೋಧ, 28. ಸ್ವೇಚ್ಛೆಯಿಂದ ಇರುವುದು, 29. ಹಸಿವಿನಿಂದ ಭಯ, 30. ಶಾಸ್ತ್ರಲಾಭ, 31. ಸ್ವೇಚ್ಛೆಯ ವಿನೋದ, 32 ಯುದ್ಧ, 33. ಪುಣ್ಯಕಾರ್ಯ, 34. ಪಾಪಕಾರ್ಯ, 35. ಕ್ರೂರಕರ್ಮ, 36 ಬಹುಸಂತೋಷ.

## ॥ ವಿಷ ಘಟಿಗಳು ॥

ಅಂಗೇನ್ವೈವವಿಯತ್ಪಯೋನಿಲನರೋರಾಗೀನಗಂನಾಖಿನಾ
ದಿವ್ಯಂ ರಾಷ್ಟ್ರನರೋಭಯೋ ವಿಟನಟೋ ವಾದ್ಯೈರ್ನರೋ ವೀರನುತ್ ।
ನಿಷ್ಠಾನಿತ್ಯನಯೋದಯಂ ತುಕವಿರಾಣ್ಣಂಬಾನಿಶಾ ವಕ್ರನು–
ದ್ಧವ್ಯಾಶಾದಿಷು ತಾನತೀತ್ಯ ಪರತೋ ನಾಡ್ಯಶ್ಚತಸ್ರೋ ವಿಷಮ್ ॥ 58 ॥

ಕೃತ್ತಿಕೆಯಿಂದ ಕ್ರಮವಾಗಿ 30, 40, 14, 11, 30, 20, 32, 30, 20, 18, 22, 20, 14, 14, 10, 14, 20, 24, 20, 10, 10, 18, 16, 24, 30, 50, 24 –ಈ ಗಳಿಗೆಯಿಂದ 4 ಗಳಿಗೆ ಕಾಲ ವಿಷಘಟಿಯಾಗಿರುತ್ತದೆ.

## ॥ ಅಮೃತಘಟಿಗಳು ॥

ಸಂಕೃತ್ಯಾಕೃತಿನಾಗಸಾಯಕಜಿನೈರಿಂದೋತ್ಕೃತಿಭ್ಯಾಂ ಜಿನೈ–
ರ್ಮನ್ವರ್ಕೈಸ್ತಿಥಿಶಕ್ರನಾಗವಸುಭಿರ್ವೇದಾಷ್ಟಶಕ್ರೈಃ ಕ್ರಮಾತ್ ।
ವಿದ್ಯೇಂದ್ರಾಬ್ಧಿಯುಗಾರ್ಕದಿಗ್ಧೃತಿಜಿನೈರರ್ಕೈಃ ಪುರಾಣೈರ್ಯುತಾ
ನಾಡೀಸ್ತ್ರಿಂಶತಮೇಷ್ವತೀತ್ಯ ಪರತೋ ನಾಡ್ಯಶ್ಚತಸ್ರೋಽಮೃತಮ್ ॥ 59 ॥

ಕೃತ್ತಿಕಾದಿ ನಕ್ಷತ್ರಗಳಲ್ಲಿ ಪೂರ್ವಾರ್ಧದ ಅನಂತರ 24, 22, 8, 5, 24, 14, 26, 24, 14, 12, 15, 14, 8, 8, 4, 8, 14, 18, 14, 4, 4, 12, 10, 18, 24, 12, 18 –ಈ ಗಳಿಗೆಗಳನ್ನು ಸೇರಿಸಿದಾಗ ಅನಂತರದ 4 ಗಳಿಗೆಗಳ ಕಾಲ ಅಮೃತಘಟಿಕಾಲವಾಗಿರುತ್ತದೆ.

ಮುಹೂರ್ತ ಹೇಳುವವರು ಅಗತ್ಯವಾಗಿ ತಿಳಿಯಬೇಕಾದ ಹಲವಾರು ಶುಭಾಶುಭಯೋಗಗಳಿವೆ. ಇಲ್ಲಿಯ ಸಂಪ್ರದಾಯಾನುಸಾರ ಅದನ್ನು ಹೆಚ್ಚಾಗಿ ಗಮನಿಸಬೇಕಾದ ಅಗತ್ಯವಿಲ್ಲ ಅದರ ಶುಭಾಶುಭಫಲಗಳು ಉದಯಾದಿ $3^3/_4$ ಗಳಿಗೆವರೆಗೆ ಮಾತ್ರವಿರುವುದಾಗಿಯೂ ಅಭಿಪ್ರಾಯವಿದೆ.

ತಿಥಿ ನಕ್ಷತ್ರಯೋಗಾನಾಂ ಫಲಮರ್ಕೋದಯಾದಿತಃ ।
ಅರ್ಧಯಾಮಾತ್ ಪರಂ ನಾಸ್ತಿ ಶುಭಂ ವಾಪ್ಯಶುಭಂ ಚ ಯತ್ ॥

ಆದರೂ ಇದರ ವಿಚಾರವನ್ನು ತಿಳಿದುಕೊಳ್ಳಬೇಕಾದರೆ ಪ್ರಶ್ನಸಂಗ್ರಹ 8ನೆ ಅಧ್ಯಾಯ 46ನೆ ಶ್ಲೋಕದಿಂದ 59ನೆ ಶ್ಲೋಕದ ವರೆಗೆ ಹಾಗೂ ಅದೇ ಅಧ್ಯಾಯದ 74ನೆ ಶ್ಲೋಕದಿಂದ 78ನೆ ಶ್ಲೋಕದ ವರೆಗೆ ನೋಡಬಹುದು ಮತ್ತೂ ವಿಸ್ತಾರವಾಗಿ ಮಾಧವೀಯಾದಿ ಗ್ರಂಥಗಳಲ್ಲಿವೆ

ಇಲ್ಲಿ ಮುಹೂರ್ತಚಿಂತಾಮಣಿಯ 3 ಯೋಗಗಳನ್ನು ತಿಳಿಸಲಾಗುತ್ತದೆ.

## ॥ ಸಿದ್ಧಾದಿ ಯೋಗಗಳು ॥

ನಂದಾ ಚ ಭದ್ರಾ ಚ ಜಯಾ ಚ ರಿಕ್ತಾ
ಪೂರ್ಣೇತಿ ತಿಥ್ಯೋಽಶುಭಮಧ್ಯ ಶಸ್ತಾಃ ।
ಸಿತೇಽಸಿತೇ ಶಸ್ತಮಧ್ಯಾಧಮಾಃ ಸ್ಯುಃ
ಸಿತಜ್ಞಭೌಮಾರ್ಕಿಗುರೌ ಚ ಸಿದ್ಧಾಃ ॥ 60 ॥

ನಂದಾದಿ ಮೊದಲ 5 ತಿಥಿಗಳು ಶುಕ್ಲಪಕ್ಷದಲ್ಲಿ ಅಶುಭ. 2ನೇ ಪಂಚಕ ಮಧ್ಯಮ. 3ನೇ ಪಂಚಕ ಶುಭ. ಕೃಷ್ಣಪಕ್ಷದಲ್ಲಿ ಮೊದಲ 5 ಶುಭ 2ನೇ ಪಂಚಕ ಮಧ್ಯಮ. 3ನೇ ಪಂಚಕ ಅಧಮ.

ನಂದಾತಿಥಿ ಶುಕ್ರವಾರ, ಭದ್ರಾ ಬುಧವಾರ, ಜಯಾ ಕುಜವಾರ, ರಿಕ್ತಾ ಶನಿವಾರ, ಪೂರ್ಣಾತಿಥಿ ಗುರುವಾರ ಬಂದಲ್ಲಿ ಸಿದ್ಧಯೋಗಗಳಾಗುತ್ತವೆ

ನಂದಾ ಭದ್ರಾ ನಂದಿಕಾಖ್ಯಾ ಜಯಾ ಚ
ರಿಕ್ತಾ ಭದ್ರಾ ಚೈವ ಪೂರ್ಣಾಮೃತಾರ್ಕಾತ್ ।
ಯಾಮ್ಯಂ ತ್ವಾಷ್ಟ್ರಂ ವೈಶ್ವದೇವಂ ಧನಿಷ್ಠಾ–
ಽರ್ಯಮ್ಣಂ ಜ್ಯೇಷ್ಠಾಂತ್ಯಂ ರವೇರ್ದಗ್ಧಭಂ ಸ್ಯಾತ್ ॥ 61 ॥

ರವಿವಾರ ನಂದಾತಿಥಿ, ಸೋಮವಾರ ಭದ್ರಾತಿಥಿ, ಕುಜವಾರ ನಂದಾತಿಥಿ, ಬುಧವಾರ ಜಯಾ, ಗುರುವಾರ ರಿಕ್ತಾ, ಶುಕ್ರವಾರ ಭದ್ರಾ, ಶನಿವಾರ ಪೂರ್ಣಾತಿಥಿ ಬಂದಲ್ಲಿ ಮೃತಾಯೋಗಗಳಾಗುತ್ತವೆ.

ರವಿವಾರ ಭರಣೀ, ಸೋಮವಾರ ಚಿತ್ರಾ, ಕುಜವಾರ ಉತ್ತರಾಷಾಢಾ, ಬುಧವಾರ ಧನಿಷ್ಠಾ, ಗುರುವಾರ ಹುಬ್ಬಾ, ಶುಕ್ರವಾರ ಜ್ಯೇಷ್ಠಾ, ಶನಿವಾರ ರೇವತೀ ನಕ್ಷತ್ರಗಳಾದರೆ ದಗ್ಧಯೋಗಗಳಾಗುತ್ತದೆ

॥ ಇತಿ ಮುಹೂರ್ತಸನ್ಮಾರ್ಗದರ್ಶಿನ್ಯಾಂ ಸಂಜ್ಞಾಧ್ಯಾಯಃ ಪ್ರಥಮಃ ॥

* * *

# ॥ ನಿತ್ಯದೋಷಾದಿ ಪರಿಶೀಲನಾಧ್ಯಾಯಃ ॥ 2 ॥

## ॥ ಜ್ಯೋತಿಶ್ಶಾಸ್ತ್ರದ ವಿಭಾಗಗಳು ॥

ಜಾತಕಗೋಳನಿಮಿತ್ತ ಪ್ರಶ್ನಮುಹೂರ್ತಾಖ್ಯಗಣಿತ ನಾಮಾನಿ ।
ಅಭಿದಧತೀಹ ಷಡಂಗಾನ್ಯಾಚಾರ್ಯಾ ಜ್ಯೋತಿಷೇ ಮಹಾಶಾಸ್ತ್ರೇ ॥ 1 ॥

ಜ್ಯೋತಿಶ್ಶಾಸ್ತ್ರದಲ್ಲಿ ಜಾತಕ, ಗೋಳ, ನಿಮಿತ್ತ, ಪ್ರಶ್ನ, ಮುಹೂರ್ತ ಮತ್ತು ಗಣಿತ ಎಂದು 6 ವಿಭಾಗಗಳಿವೆ.

ಈ 6 ವಿಭಾಗಗಳಲ್ಲಿ ನಿಮಿತ್ತವೆಂಬುದು ವಾತಾವರಣದ ಪ್ರಸನ್ನತೆ, ಅಪ್ರಸನ್ನತೆಗಳನ್ನು ಹೊಂದಿಕೊಂಡಿದೆ. ಗಣಿತವು ಆಕಾಶದಲ್ಲಿ ಚಲಿಸುತ್ತಿರುವ ಗೋಳಗಳ ಚಲನೆಯನ್ನನುಸರಿಸಿ ರೂಪುಗೊಂಡಿದೆ. ಸ್ವಾಭಾವಿಕವಾಗಿಯೇ ಕಾಲ ಕಾಲಕ್ಕೆ ಚಲನೆಯಲ್ಲಿ ವ್ಯತ್ಯಾಸವು ಕಂಡುಬರುವುದರಿಂದ ಗಣಿತಸಿದ್ಧಾಂತಗಳೂ ಅನೇಕವಾಗಿವೆ. 'ಬ್ರಾಹ್ಮಃ ಸೌರಶ್ಚ ವಾಸಿಷ್ಠಃ' ಇತ್ಯಾದಿ ಪ್ರಮಾಣಗಳಂತೆ ಆಯಾ ಕಾಲಕ್ಕೆ ತಕ್ಕದಾಗಿ ಋಷಿಮುನಿಗಳು ಅನೇಕ ಸಿದ್ಧಾಂತಗಳನ್ನು ರಚಿಸಿದ್ದಾರೆ

## ॥ ಭಾರತೀಯ ಜ್ಯೋತಿರ್ಗಣಿತದ ಚರಿತ್ರೆ ॥

ಬ್ರಹ್ಮಸಿದ್ಧಾಂತ ಸೂರ್ಯಸಿದ್ಧಾಂತಾದಿಗಳು ಯುಗಾಂತರದವಾಗಿದ್ದು ಕಲಿ ಯುಗದಲ್ಲಿಯೂ ಹಲವು ಸಿದ್ಧಾಂತಗಳು ನಿರ್ಮಿತವಾದವು. ಶಕ 422ರಲ್ಲಿ ಆರ್ಯಭಟೀಯ, 427ರಲ್ಲಿ ಪಂಚಸಿದ್ಧಾಂತಿಕೆ, 520ರಲ್ಲಿ ಬ್ರಹ್ಮಗುಪ್ತನ ಬ್ರಹ್ಮಸ್ಫುಟ ಸಿದ್ಧಾಂತ, 875ರಲ್ಲಿ ದ್ವಿತೀಯಾರ್ಯಸಿದ್ಧಾಂತ, 1072ರಲ್ಲಿ ಭಾಸ್ಕರಾಚಾರ್ಯರ ಸಿದ್ಧಾಂತಶಿರೋಮಣಿ, 1525ರಲ್ಲಿ ಮುನೀಶ್ವರರ ಸಿದ್ಧಾಂತಸಾರ್ವಭೌಮ, ಅನಂತರ ವರಹಿತ, ದೃಗ್ಗಣಿತ –ಈಗ ನೂತನ ದೃಗ್ಗಣಿತ ಗ್ರಹಣಾದಿಗಳಿಗೆ ಸಂವಾದಿಯಾಗಿ ಕಂಡುಬರುತ್ತದೆ.

ಪ್ರಸಿದ್ಧ ಗಣಿತಜ್ಞನಾದ ಬ್ರಹ್ಮಗುಪ್ತನು ತನ್ನ ಸಿದ್ಧಾಂತದಲ್ಲಿ ಈ ರೀತಿ ಹೇಳುತ್ತಾನೆ–

ಶ್ರೀಷೇಣ ವಿಷ್ಣುಚಂದ್ರ ಪ್ರದ್ಯುಮ್ನಾರ್ಯಭಟಲಾಲಸಿಂಹಾನಾಂ ।
ಗ್ರಹಣಾದಿವಿಸಂವಾದಾತ್ ಪ್ರತಿ ದಿವಸಂ ಸಿದ್ಧಮಜ್ಞತ್ವಮ್ ॥ 2 ॥
ಯುಕ್ತ್ಯಾರ್ಯಭಟೋಕ್ತಾನಿ ಪ್ರತ್ಯೇಕಂ ದೂಷಣಾನಿಯೋಜ್ಯಾನಿ ।
ಶ್ರೀಷೇಣ ಪ್ರಭೃತೀನಾಂ ಕಾನಿಚಿದನ್ಯಾನಿ ವಕ್ಷ್ಯಾಮಿ ॥ 3 ॥

ಈ ವ್ಯತ್ಯಾಸಗಳು ಸಂಭವಿಸುತ್ತವೆ ಎಂದು 'ಕಾಲಭೇದೋಽತ್ರ ಕೇವಲಂ' ಎಂಬಲ್ಲಿ ಸೂರ್ಯಸಿದ್ಧಾಂತವು ಸೂಚಿಸುತ್ತದೆ.

ನಮ್ಮ ಗಣಿತಶಾಸ್ತ್ರದ ಚರಿತ್ರೆ ಈ ರೀತಿ ಇದೆ.

ಬ್ರಹ್ಮಾಚಾರ್ಯ ವಸಿಷ್ಠಕಶ್ಯಪಮುಖ್ಯೈರ್ಯತ್ ಖೇಟಕರ್ಮೋದಿತಮ್
ತತ್ತತ್ಕಾಲಜಮೇವ ತಥ್ಯಮಥ ತತ್ ಭೂರಿಕ್ಷಣೇಽಭೂತ್ ಶ್ಲಥಮ್ ।
ಪ್ರಾಪಾತೋಽಥ ಮಯಾಸುರಃ ಕೃತಯುಗಾಂ–
ತೇಽರ್ಕಾತ್ ಸ್ಫುಟಂ ತೋಷಿತಾತ್
ತಚ್ಚಾಸ್ತಿ ಸ್ಮ ಕಲೌ ತು ಸಾಂತರಮಥಾಭೂಚ್ಚಾರು ಪಾರಾಶರಮ್ ॥ 4 ॥

ತಜ್ಜ್ಞಾತ್ವಾಽರ್ಯಭಟಃ ಖಿಲಂ ಬಹುತಿಥೇ ಕಾಲೇಽಕರೋತ್ ಪ್ರಸ್ಫುಟಂ
ತತ್‌ಸ್ರಸ್ತಂ ಕಿಲ ದುರ್ಗಸಿಂಹಮಿಹಿರಾದ್ಯೈಸ್ತನ್ನಿಬದ್ಧಂ ಸ್ಫುಟಮ್ ।
ತಚ್ಚಾಭೂಚ್ಛಿಥಿಲಂ ತು ಜಿಷ್ಣುತನಯೇನಾಕಾರಿ ವೇಧಾತ್ತತೋ
ಬ್ರಹ್ಮೋಕ್ತ್ಯಾಶ್ರಿತಮೇತದಪ್ಯಥ ಬಹೌಕಾಲೇಽಭವತ್ ಸಾಂತರಮ್ ॥ 5 ॥

ಶ್ರೀಕೇಶವಃ ಸ್ಫುಟತರಂ ಕೃತವಾನ್ ಹಿ ಸೌರಾ–
ರ್ಯಾಸನ್ನಮೇತದಪಿ ಷಷ್ಟಿಮಿತೇ ಗತಾಬ್ದೇ ।
ದೃಷ್ಟ್ವಾ ಶ್ಲಥಂ ಕಿಮಪಿ ತತ್ತನಯೋ ಗಣೇಶಃ
ಸ್ಪಷ್ಟಂ ಯಥಾ ಸ್ವಕೃತದೃಗ್ಗಣಿತೈಕ್ಯಮತ್ರ ॥ 6 ॥

–ಗ್ರಹಲಾಘವದಲ್ಲಿ ಗಣೇಶ ದೈವಜ್ಞ (ಶಕ 1353)

ಈ ಚರಿತ್ರೆಗೆ ಅನುಸಾರವಾಗಿ ಗ್ರಹಣಾದಿ ಸಂವಾದ ಬರುವುದು ಈಗ ನೂತನ ದೃಗ್ಗಣಿತದಲ್ಲಿ ಮಾತ್ರ. ಇತರ ಗಣಿತದಲ್ಲಿ ಗ್ರಹಣಕ್ಕೆ 45 ನಿಮಿಷ ವ್ಯತ್ಯಾಸ ಬರುತ್ತದೆ

ಜ್ಯೋತಿಷ ವಿಭಾಗದ ಪ್ರಶ್ನೆ–ಮುಹೂರ್ತ–ಜಾತಕಗಳ ಬಗ್ಗೆ ಪೂರ್ವಿಕರು ಹೀಗೆ ಹೇಳಿದ್ದಾರೆ:

ಯದಾ ಯಶ್ಚೈವ ಸಿದ್ಧಾಂತೋ ಗಣಿತೇ ದೃಕ್ಸಮೋ ಭವೇತ್ ।
ತದಾ ತೇನೈವ ಸಂಸಾಧ್ಯಂ ಜಾತಕಂ ಗಣಯೇದ್ಬುಧಃ ॥ 7 ॥

ಯೋಗೇ ಗ್ರಹಾಣಾಂ ಗ್ರಹಣೇಽರ್ಕಸೋಮಯೋಃ
ಮೌಢ್ಯೇ ತಥಾ ವಕ್ರಗತೌ ಚ ಪಂಚಸು ।
ದೃಷ್ಟಾನುರೂಪಂ ಕರಣಂ ಯದನ್ವಹಂ
ತೇನ ಗ್ರಹೇಂದ್ರಾನ್ ಗಣಯೇತ್ತ್ರಿವಾರಮ್ ॥ 8 ॥

ಯಸ್ಮಿನ್ ಪಕ್ಷೇ ಯತ್ರ ಕಾಲೇ ಯೇನ ದೃಗ್ಗಣಿತೈಕ್ಯಕಮ್ ।
ದೃಶ್ಯತೇ ತೇನ ಮಾರ್ಗೇಣ ಕುರ್ಯಾತ್ತಿಥ್ಯಾದಿನಿರ್ಣಯಮ್ ॥ 9 ॥

ಪಂಚಾಂಗಗಣನೆ ಮಾಡುವುದು ಕರಣಗ್ರಂಥಗಳಿಂದ. ಕರಣಗ್ರಂಥವು ದೃಷ್ಟಾನು ರೂಪವಾಗಿರಬೇಕು ಎಂದು ಇದರಲ್ಲಿ ಸ್ಪಷ್ಟಪಡಿಸಿದ್ದಾರೆ.

ಮುಹೂರ್ತನಿರ್ಣಯಕ್ಕೆ ಆಧಾರಗ್ರಂಥಗಳಾಗಿ ವೇದಗಳು, ವೇದಗಳನ್ನು ಅನುಸರಿಸುವ ನಾನಾ ಶಾಖೆಗಳ ಗೃಹ್ಯಸೂತ್ರಗಳು, ಅನೇಕ ಜ್ಯೋತಿಷಶಾಸ್ತ್ರ ಗ್ರಂಥಗಳು, ಸಾಮಾನ್ಯ ಜ್ಯೋತಿಷ ಗ್ರಂಥಗಳು, ಆಯಾ ಊರಿಗೆ ಸಂಬಂಧಪಟ್ಟಂತೆ 'ಇದಮಿತ್ಥಂ' ಎಂದು ನಿರ್ಣಯಿಸಿರುವ ಮುಹೂರ್ತಗ್ರಂಥಗಳು ಮೂಲವಾಗಿರುತ್ತವೆ. ಈ ಎಲ್ಲಾ ಶಾಸ್ತ್ರಗ್ರಂಥಗಳನ್ನು ಚೆನ್ನಾಗಿ ವಿಮರ್ಶಿಸಿ, ಪರಸ್ಪರ ಭಿನ್ನಗಳಾದ ಋಷಿವಚನಗಳು ಯಾವಯಾವ ಪ್ರಕರಣದಲ್ಲಿ ಹೇಗೆ ಹೇಗೆ ಉಪಯುಕ್ತವೆಂಬುದನ್ನು ಧರ್ಮಶಾಸ್ತ್ರಗಳು ಹಾಗೂ ಅದರ ನಿಬಂಧಕಾರರು ವಿವರಿಸುತ್ತಾರೆ. ನಮ್ಮ ಎಲ್ಲಾ ಧಾರ್ಮಿಕ ಆಚಾರ-ವಿಚಾರ, ವಿಧಿ-ನಿಯಮಗಳನ್ನು ನಿಯಂತ್ರಿಸುವ ಧರ್ಮಶಾಸ್ತ್ರ ಗಳ ಆದೇಶಗಳನ್ನು ಉಲ್ಲಂಘಿಸುವುದು ಅಶಾಸ್ತ್ರೀಯವಾಗುತ್ತದೆ.

ಮುಹೂರ್ತಶಾಸ್ತ್ರದ ಅನುಬಂಧಚತುಷ್ಟಯದ ಬಗ್ಗೆ ನಾರದರು ಹೀಗೆ ಹೇಳುತ್ತಾರೆ-

**ಅಸ್ಯ ಶಾಸ್ತ್ರಸ್ಯ ಸಂಬಂಧಃ ವೇದಾಂಗಮಿತಿ ಕೀರ್ತಿತಮ್ ।**
**ಅಭಿಧೇಯಂ ಚ ಜಗತಃ ಶುಭಾಶುಭ ನಿರೂಪಣಂ ॥ 10 ॥**

ಈ ಮುಹೂರ್ತಶಾಸ್ತ್ರವು ವೇದಾಂಗವಾಗಿರುತ್ತದೆ. ಈ ಕಾಲವು ಶುಭ, ಈ ಕಾಲವು ಅಶುಭ ಎಂದು ನಿರೂಪಿಸುವುದು ಇದರ ವಿಷಯವಾಗಿರುತ್ತದೆ

**ಯಜ್ಞಾಧ್ಯಯನ ತಿಥ್ಯಾದೇಃ ಚೇಹ ಷೋಡಶಕರ್ಮಣಾಮ್ ।**
**ಪ್ರಯೋಜನಂ ಚ ವಿಜ್ಞೇಯಂ ತತ್ತತ್ಕಾಲವಿನಿರ್ಣಯಃ ॥ 11 ॥**

ಯಜ್ಞ, ಅಧ್ಯಯನ, ತಿಥಿ ಮುಂತಾದವುಗಳಿಗೆ ವೈದಿಕಕರ್ಮಗಳಿಗೆ ಕಾಲ ನಿರ್ಣಯ ಮಾಡುವುದು ಇದರ ಪ್ರಯೋಜನ.

**ವಿನೈತದಖಿಲಂ ಶ್ರೌತಂ ಸ್ಮಾರ್ತಂ ಕರ್ಮ ನ ಸಿಧ್ಯತಿ ।**
**ತಸ್ಮಾಜ್ಜಗದ್ಧಿತಾರ್ಥಾಯ ಬ್ರಹ್ಮಣಾ ನಿರ್ಮಿತಂ ಪುರಾ ॥ 12 ॥**

**ಸಮವಾಯಃ ಕರ್ಮಣಾಂ ಹಿ ಯಜ್ಞೋಪನಿಷದೀರಿತಃ ।**
**ತದಧೀತವತಃ ಕರ್ಮ ಸರ್ವಂ ತತ್ರೈವ ಸುಗ್ರಹಮ್ ॥ 13 ॥**

ಎಂಬ ಪ್ರಮಾಣದಂತೆ ಗರ್ಭಲಂಭನಾದಿ ವೈದಿಕ ಸಂಸ್ಕಾರಕರ್ಮಗಳೂ, ವಾಪೀಕೂಪ ದೇವಪ್ರತಿಷ್ಠಾದಿ ಸ್ಮಾರ್ತತಾಂತ್ರಿಕಕರ್ಮಗಳೂ ಮುಹೂರ್ತಶಾಸ್ತ್ರದ ಸಹಾಯವಿಲ್ಲದೆ ಸಿದ್ಧಿಸುವುದಿಲ್ಲ ಅದಕ್ಕೋಸ್ಕರ ಲೋಕಹಿತವನ್ನು ಅಪೇಕ್ಷಿಸಿ ಬ್ರಹ್ಮದೇವರು ಕಾಲನಿರ್ಣಯಶಾಸ್ತ್ರವನ್ನು ರಚಿಸಿದರು

## ॥ ಮೌಹೂರ್ತಿಕನ ಅರ್ಹತೆ ॥

ವಿಜ್ಞಾತ ಶಬ್ದಶಾಸ್ತ್ರೋ ವಿವಿಧೇ ಗಣಿತೇ ಚ ಯಶ್ಚ ನಿಷ್ಣಾತಃ ।
ಜ್ಯೋತಿಶ್ಶಾಸ್ತ್ರ ಶ್ರವಣಾಧಿಕಾರೋ ಹಂತ ತಸ್ಯೈವ ॥ 14 ॥

ವೇದವೇದಾಂಗ ವ್ಯಾಕರಣ ಶಾಸ್ತ್ರಗಳನ್ನು ಅಭ್ಯಾಸಮಾಡಿದ್ದು ವಿವಿಧ ಗಣಿತಕ್ರಿಯಾ ಕಲಾಪಗಳನ್ನು ತಿಳಿದವರು ಮುಹೂರ್ತಶಾಸ್ತ್ರವನ್ನು ಕಲಿಯಲು ಅಧಿಕಾರಿಗಳಾಗಿರುತ್ತಾರೆ.

## ॥ ಮುಹೂರ್ತದ ಸತ್‌ಫಲಗಳು ಸಿಗಬೇಕಾದರೆ ಮುಹೂರ್ತ ಕೇಳಬೇಕಾದ ವಿಧಿ ॥

ಉಪಾಸ್ಯ ರಾಜಾನಮಿವಾಧಿಕಾರೀ
ಭಕ್ತ್ಯಾ ಪ್ರಣಮ್ಯೈವ ಗುರುಂ ಸುಮಂತ್ರಃ ।
ಅಭ್ಯರ್ಚ್ಯ ದೈವಜ್ಞಮತೋಽಭ್ಯುಪಾತ್ತಃ
ಶುಭೋ ಮುಹೂರ್ತೋ ನ ಶುಭೋಽನ್ಯಥಾ ಸ್ಯಾತ್ ॥ 15 ॥

ಸನ್ಮುಹೂರ್ತ ಬೇಕೆಂದಿರುವವರು ಅಧಿಕಾರಿಯು ಹೇಗೆ ರಾಜನಿಗೆ ಒಳ್ಳೆಯ ಗೌರವವನ್ನು ಸಲ್ಲಿಸಿ ಸಾಧ್ಯವಾದಷ್ಟು ಕಪ್ಪಕಾಣಿಕೆಯನ್ನು ರಾಜನಿಗೆ ಪ್ರೀತಿ ದಾಯಕವಾದ ವಸ್ತುಗಳನ್ನು ಕೊಟ್ಟು ತೃಪ್ತಿಪಡಿಸಿ ತಮ್ಮ ಮನದಿಂಗಿತವನ್ನು ತಿಳಿಸಿ ಅವನಿಂದ ಅನುಕೂಲತೆಯನ್ನು ಪಡೆಯುವರೋ ಅದೇ ರೀತಿ ದೈವಜ್ಞನನ್ನು ತೃಪ್ತಿಪಡಿಸಿ ವಿಷಯವನ್ನು ತಿಳಿಸಿ ಅವನಿಂದ ಸನ್ಮುಹೂರ್ತವನ್ನು ಹೊಂದಬೇಕು.

ತಸ್ಮಾನ್ನೃಪಃ ಕುಸುಮರತ್ನಫಲಾಗ್ರಹಸ್ತಃ
ಪ್ರಾತಃ ಪ್ರಣಮ್ಯ ರವಯೇ ಹರಿದಿಙ್ಮುಖಸ್ಥಃ ।
ಹೋರಾಂಗತಂತ್ರಕುಶಲಾನ್ ಹಿತಕಾರಿಣಶ್ಚ
ಸಂಪೂಜ್ಯ ದೈವಗಣಕಾನ್ ಸಕೃದೇವ ಪೃಚ್ಛೇತ್ ॥ 16 ॥

ಆದ್ದರಿಂದ ಪೃಚ್ಛಕನು ಫಲಪುಷ್ಪ ತಾಂಬೂಲ ದಕ್ಷಿಣಾದಿ ಸಮೇತನಾಗಿ ಬೆಳಿಗ್ಗೆ ಸೂರ್ಯದೇವರಿಗೆ ಅಭಿಮುಖನಾಗಿ ನಿಂತು ಸೂರ್ಯದೇವರಿಗೂ ಕಾಲಾಭಿಮಾನಿ ದೇವತೆಗಳಿಗೂ ನಮಸ್ಕರಿಸಿ, ಜ್ಯೋತಿಷದ 6 ವಿಭಾಗಗಳಲ್ಲಿಯೂ ನಿಪುಣನಾದ, ತನಗೆ ಆಪ್ತನೂ ಆದ ದೈವಜ್ಞನನ್ನು ನಮಸ್ಕರಿಸಿ ಫಲಪುಷ್ಪಾದಿ ಕೊಟ್ಟು ಮುಹೂರ್ತವನ್ನು ಕೇಳಬೇಕು.

ಪ್ರಸನ್ನ ದೈವಜ್ಞವಿಧಿಪ್ರದಿಷ್ಟಂ ಸುಖಪ್ರದಂ ದುರ್ಲಭಮಲ್ಪಪುಣ್ಯೈಃ ।
ಸಪ್ತಾಂಗಸಂಪತ್ತಿಸಮೇತಮೇತನ್ಮುಹೂರ್ತರಾಜ್ಯಂ ಸುಕೃತೋ ಲಭಂತೇ ॥ 17 ॥

ಸೂರ್ಯನಾರಾಯಣನನ್ನೂ ಕಾಲಾಭಿಮಾನಿದೇವತೆಗಳನ್ನೂ ಸದಾ ಆರಾಧಿಸು ತ್ತಿರುವ, ಪ್ರಸನ್ನನಾದ ದೈವಜ್ಞನಿಂದ ವಿಧಿಪ್ರಕಾರವಾಗಿ ಸಪ್ತಾಂಗ ಸಂಪತ್ತುಳ್ಳ

(ಪಂಚಾಂಗ ರಾಶಿಗ್ರಹ) ಮುಹೂರ್ತವನ್ನು ಪಡೆದರೆ ಒಂದು ರಾಜ್ಯವನ್ನು ಪಡೆದಷ್ಟು ಶುಭಫಲವಿದೆ.

**ಕಲ್ಯಾಣದೇವತಾ ದೃಷ್ಟ್ಯಾ ಸನ್ಮುಹೂರ್ತಂ ಶುಭಂ ಭವೇತ್ ।**
**ಕಲ್ಯಾಣದೇವತಾದೃಷ್ಟಿಹೀನಾನಾಂ ತು ಕುತಃ ಸುಖಮ್ ॥ 18 ॥**

ನಕ್ಷತ್ರ ತಿಥ್ಯಾದಿ ದೇವತೆಗಳು, ಆದಿತ್ಯಾದಿ ನವಗ್ರಹದೇವತೆಗಳು ಪ್ರಸನ್ನರಾಗಿ ಆ ಸಮಯವನ್ನು ನೋಡಿದರೆ ಮಾತ್ರ ಸನ್ಮುಹೂರ್ತವಾಗುತ್ತದೆ. ಇಲ್ಲವಾದರೆ ಅದು ದುರ್ಮುಹೂರ್ತ. ಅದರಿಂದಲೇ 'ಸುಮುಹೂರ್ತೋಽಸ್ತ್ವಿತಿ ಭವಂತೋ ಬ್ರುವಂತು' ಎಂದು ಕೇಳುವ ಸಂಪ್ರದಾಯವು ನಮ್ಮಲ್ಲಿ ಉಳಿದಿದೆ.

## ॥ ಗೃಹ್ಯಸೂತ್ರಾದಿಗಳಲ್ಲಿ ಮುಹೂರ್ತದ ವಿಧಿ ॥

ಗೃಹ್ಯಸೂತ್ರಕಾರರು ದಿನಮಾಸಕಾರ್ಯಗಳಾದ ನಾಮಕರಣ ಸೀಮಂತಾದಿಗಳಿಗೆ ಮುಹೂರ್ತವನ್ನು ಹೇಳಲಿಲ್ಲ. ಯಾಕೆಂದರೆ ಮುಹೂರ್ತವನ್ನು ನಮಗೆ ಬೇಕಾದ ಹಾಗೆ ಆರಿಸುವಷ್ಟು ಸಮಯವಿಲ್ಲ. ಅವರು ನಾಲ್ಕು ಸಂಸ್ಕಾರಗಳಿಗೆ ಮಾತ್ರ ಮುಹೂರ್ತವನ್ನು ವಿಧಿಸುತ್ತಾರೆ.

ಆಶ್ವಲಾಯನ ಗೃಹ್ಯಸೂತ್ರ, ಪಾರಸ್ಕರ ಗೃಹ್ಯಸೂತ್ರ, ಖಾದಿರ ಗೃಹ್ಯಸೂತ್ರ –ಈ ಗ್ರಂಥಗಳ ಪ್ರಕಾರ ಮುಹೂರ್ತ ಹೀಗಿರಬೇಕು.

**ಉದಗಯನೇ ಆಪೂರ್ಯಮಾಣಪಕ್ಷೇ ಕಲ್ಯಾಣೇ ನಕ್ಷತ್ರೇ ಪುಣ್ಯಾಹೇ ಚೌಳೋಪನಯನ ಗೋದಾನ ವಿವಾಹಾಃ ಸಾರ್ವಕಾಲಮೇಕೇ ವಿವಾಹಂ ಉತ್ತರಾದಿಷು ತ್ರಿಷು ತ್ರಿಷು ಸ್ವಾತ್ಯಾಂ ರೋಹಿಣ್ಯಾಂ ಮೃಗಶಿರಸಿ ವಾ ಪುಣ್ಯಾಹೇ ವಿಷ್ಟ್ಯಾದಿ ದೋಷರಹಿತೇ ಇತ್ಯರ್ಥಃ ॥**

ಪಾರಸ್ಕರ ಗೃಹ್ಯಸೂತ್ರದಲ್ಲಿ ಸೀಮಂತವನ್ನು ಇದರೊಟ್ಟಿಗೆ ಸೇರಿಸಿದ್ದಾರೆ. ಇದರಲ್ಲಿ ಹೇಳಿದ 12 ನಕ್ಷತ್ರಗಳು ಉತ್ತಮ. ಜ್ಯೋತಿಶ್ಶಾಸ್ತ್ರದಲ್ಲಿ ಇದಕ್ಕೆ ಇನ್ನೂ ಪುನರ್ವಸು, ಪುಷ್ಯ, ಅನುರಾಧಾ, ಶತಭಿಷಾ –೪ ನಕ್ಷತ್ರಗಳನ್ನು ಸೇರಿಸಿದ್ದಾರೆ.

ಗೃಹ್ಯಸೂತ್ರಗಳಲ್ಲಿ ಹೇಳಿದ ಉತ್ತರಾಯಣ, ಶುಕ್ಲಪಕ್ಷ, ಶುಭನಕ್ಷತ್ರಗಳು ವೇದವಿಧಿಯನ್ನೇ ಸಂಪೂರ್ಣ ಅನುಸರಿಸುತ್ತವೆ. ಚೌಲೋಪನಯನಗಳಿಗೆ ಈಗಲೂ ಉತ್ತರಾಯಣವನ್ನು ಸಂಪೂರ್ಣ ಅನುಸರಿಸುತ್ತಾರೆ. ಉತ್ತರಾಯಣವು ದೇವತೆಗಳಿಗೆ ಹಗಲು. ದಿನಮಾಸಗಳ ನಿಯಮವಿಲ್ಲದ ಕಾರ್ಯಗಳನ್ನೆಲ್ಲಾ ಉತ್ತರಾಯಣದಲ್ಲಿ ಮಾಡುವುದು ಉತ್ತಮ.

**ತಸ್ಮಾತ್ ಪೂರ್ವಪಕ್ಷೋಽಪರಪಕ್ಷಾತ್ ಕರುಣ್ಯತರಃ**

ಎಂಬ ವೇದದ ಸೂಚನೆಯಂತೆ ಶುಭಕರ್ಮಗಳಿಗೆ ಶುಕ್ಲಪಕ್ಷವೇ ಉತ್ತಮ. 'ಸಾರ್ವಕಾಲಮೇಕೇ ವಿವಾಹಂ' ಎಂದು ಹೇಳಿರುವುದರಿಂದ ಅತ್ಯಾವಶ್ಯಕ ಸಂದರ್ಭಗಳಲ್ಲಿ ಮದುವೆಗೆ ಕೆಲವು ಸಮಯ ನಿಯಮಗಳನ್ನು ಸಡಿಲಿಸಬಹುದೆಂದು ತೋರುತ್ತದೆ.

## ॥ ನಿತ್ಯದೋಷಗಳು, ಕರ್ತೃದೋಷಗಳು ॥

**ವಿಷ ವಿಷ್ಟಿ ವ್ಯತೀಪಾತ ವಧರ್ಕ್ಷಾಷ್ಟಮರಾಶಯಃ ।**
**ಗುಲಿಕಃ ಷಷ್ಠ ದೋಷಾಃ ಸ್ಯುರಪವಾದಗುಣೇಷ್ವಪಿ ॥ 19 ॥**

ಸರ್ವಸಿಂಧು (ಯೋಗಕರಣಾದಿಗಳಲ್ಲಿ ಮಹಾದೋಷಗಳು.)

ವಿಷ, ವಿಷ್ಟಿ, ವ್ಯತೀಪಾತ , ವಧರ್ಕ್ಷ (ಪ್ರಥಮ ಪರ್ಯಾಯದಿಂದ 3, 5, 7ನೆ ನಕ್ಷತ್ರಗಳು, ದ್ವಿತೀಯ–ತೃತೀಯ ಪರ್ಯಾಯದಿಂದ ಪ್ರೋಕ್ತಾಂಶಗಳು) ಅಷ್ಟಮರಾಶಿ, ಗುಲಿಕ –ಈ ಆರು ದೋಷಗಳನ್ನು ಅಪವಾದಗುಣಗಳಿದ್ದರೂ ಬಿಡಬೇಕು.

ನಿತ್ಯನೈಮಿತ್ತಿಕ ದೋಷಗಳನ್ನು 'ಮುಹೂರ್ತಪದವಿ'ಯಲ್ಲಿ 'ಉಲ್ಕೋರ್ವೀಚಲನೋಪರಾಗ' ಇತ್ಯಾದಿಗಳಿಂದ, 'ಮುಹೂರ್ತಮಾಧವೀಯ'ದಲ್ಲಿ 'ದುಷ್ಟಾಂಸಿಥ್ಯೃಕ್ಷತಾರಾನ್' ಇತ್ಯಾದಿಗಳಿಂದ ನಾನಾ ವಿಧವಾಗಿ ತಿಳಿಸುತ್ತಾರೆ. ವಿಸ್ತಾರವಾಗಿ ನೋಡಬೇಕೆಂದಿರುವವರು, ಅತ್ಯುತ್ತಮ ಮುಹೂರ್ತ ಆರಿಸಬಯಸುವವರು ಮುಹೂರ್ತ ಚಿಂತಾಮಣಿ ಆದಿಗ್ರಂಥಗಳನ್ನು ಪರಿಶೀಲಿಸುವುದು ಉತ್ತಮ.

**ವಿಷೋಷ್ಣಗುಲಿಕೈಃ ಸ್ಪೃಷ್ಟಾ ವರ್ಜನೀಯಾಶ್ಚ ರಾಶಯಃ ।**
**ದೋಷಕಾಲೇ ತ್ವತೀತೇ ತದ್ರಾಶಿಶೇಷಃ ಶುಭೋ ಮತಃ ॥ 20 ॥**

ವಿಷ ಉಷ್ಣ ಗುಲಿಕ ಸ್ಪೃಷ್ಟವಾದ ಲಗ್ನಗಳನ್ನು ಬಿಡಬೇಕು. (ಉಷ್ಣವೆಂಬುದು ನಕ್ಷತ್ರಕ್ಕೆ ಸಂಬಂಧಪಟ್ಟ ದೋಷ ಅದನ್ನು ಈ ಪರಿಸರದಲ್ಲಿ ಹೆಚ್ಚು ಗಮನಿಸುವ ರೂಢಿಯಿಲ್ಲ. .....ಉಷ್ಣವಿಚಾರ ತಿಳಿಯಬೇಕಾದರೆ 'ಪ್ರಶ್ನಸಂಗ್ರಹ'ದ 8ನೇ ಅಧ್ಯಾಯ 26ನೇ ಶ್ಲೋಕ ಗಮನಿಸಬಹುದು.)

ದೋಷಕಾಲ ದಾಟಿದ ಮೇಲೆ ಉಳಿದ ಲಗ್ನದಲ್ಲಿ ಶುಭಕಾರ್ಯ ಮಾಡಬಹುದು.

ವಿಷದೋಷದ ಪ್ರಾರಂಭ ಸಮಯವನ್ನು ಪಂಚಾಂಗದಲ್ಲಿ ಸೂಚಿಸುತ್ತಾರೆ. ಅಲ್ಲಿಂದ 4ಗಳಿಗೆ ವಿಷದೋಷವಿರುತ್ತದೆ.

**ಯದ್ರಾಶ್ಯಂತೇ ಸ್ಥಿತಾವುಷ್ಣವಿಷೌ ಮಾಂದಿಶ್ಚ ತಂ ತ್ಯಜೇತ್ ॥ 21 ॥**

ವಿಷ, ಉಷ್ಣ, ಮಾಂದಿಗಳು ಲಗ್ನದ ಕೊನೆಯಲ್ಲಿ ಬಂದರೆ ಆ ಲಗ್ನವನ್ನು ಸಂಪೂರ್ಣ ಬಿಡಬೇಕು.

**ಪಶ್ಚಾದ್ವ್ಯತೀಪಾತದಲಂ ಸಪಾರ್ಶ್ವೋ**
**ದರ್ಶಶ್ಚ ವಿಷ್ಟ್ಯಭ್ಯುದಯಶ್ಚ ಸಾಕ್ಷಾತ್ ।**
**ವರ್ಜ್ಯಾಶ್ಚ ತಾರಾಃ ಕುಜಸೂರ್ಯಸೂನ್ವೋ–**
**ರ್ವಾರೋದಯಾಃ ಪರ್ವಗುಣೈರಭೇದ್ಯಾಃ ॥ 22 ॥**

**ತ್ರಿಂಶದಂತ್ಯೇ ವ್ಯತೀಪಾತೇ ವೈಧೃತ್ಯಾಂ ತಿಥಿನಾಡಿಕಾಃ ॥ (ವರ್ಜ್ಯಾಃ) ॥ 23 ॥**

ವ್ಯತೀಪಾತದ ಕೊನೆಯ 30 ಗಳಿಗೆ ಕೃಷ್ಣಚತುರ್ದಶೀ, ಅಮಾವಾಸ್ಯೆ, ಶುಕ್ಲಪಾಡ್ಯ ತಿಥಿಗಳು, ವಿಷ್ಟಿ, ಅವಿಹಿತವಾದ ನಕ್ಷತ್ರಗಳು. ಕುಜಶನಿವಾರಗಳು, ಕುಜಶನಿಗಳ ಯೋಗದೃಷ್ಟಿಗಳು ಎಷ್ಟು ಗುಣಗಳಿದ್ದರೂ ಶುಭಕಾರ್ಯಗಳಿಗೆ ಕೂಡದು. ಶಾಸ್ತ್ರಾಂತರಗಳಲ್ಲಿ ಇದರಲ್ಲಿ ಪ್ರತಿಯೊಂದಕ್ಕೂ ಹಲವಾರು ಅಪವಾದ ಗಳಿದ್ದರೂ ಇಲ್ಲಿ ಹಿರಿಯರು ಅನುಸರಿಸಿಕೊಂಡು ಬಂದ ಸಂಪ್ರದಾಯಪ್ರಕಾರ ಇಷ್ಟನ್ನೂ ಬಿಡಬೇಕು. ಇಲ್ಲಿ ಪಾಪಯೋಗದೃಷ್ಟಿಗಳಿಗೆ ಅಪವಾದಾಧ್ಯಾಯದಲ್ಲಿ ಅಪವಾದಗಳನ್ನು ಹೇಳಿದೆ. ಗತ್ಯಂತರವಿಲ್ಲದ ಪಕ್ಷದಲ್ಲಿ ಅದನ್ನು ಅನುಸರಿಸಬಹುದು. ಇಲ್ಲಿ ಕುಜಶನಿಗಳು ಎಂಬುದಕ್ಕೆ ಕುಜಶನಿಗಳು ಮತ್ತು ಅಂತಹ ಇತರ ಪಾಪಗ್ರಹಗಳೆಂದು ಅರ್ಥ.

ಯಮದೇವತಾಕವಾದ ವೈಧೃತಿಯನ್ನೂ ಬಿಡಬೇಕು. ಅನಿವಾರ್ಯವಾದರೆ ಕೊನೆಯ 15 ಗಳಿಗೆಯಾದರೂ ಬಿಡಬೇಕು.

**ರಾಹುಮಂದಕುಜಾ ಭಾನುಃ ಕೇತುಃ ಪಾಪಾಃ ಪರೇ ಶುಭಾಃ ॥ 24 ॥**

ಈ ಮುಹೂರ್ತಶಾಸ್ತ್ರದಲ್ಲಿ ರವಿಕುಜಶನಿರಾಹುಗಳು ಪಾಪಗ್ರಹಗಳೆಂದು ತಿಳಿಯಬೇಕು.

**ಸರ್ವೇಷಾಮಿಹ ಖೇಟಾನಾಂ ದೃಷ್ಟಿಃ ಸಪ್ತಮಭೇ ಸ್ಮೃತಾ ॥ 25 ॥**

ಮುಹೂರ್ತಶಾಸ್ತ್ರದಲ್ಲಿ ಸಪ್ತಮದೃಷ್ಟಿ ಮಾತ್ರವೇ ಗಾಹ್ಯ.

## ॥ ನಕ್ಷತ್ರಸಂಜ್ಞೆಗಳು ॥

**ಜನ್ಮಸಂಪತ್ವಿಪತ್ಕ್ಷೇಮಃ ಪ್ರತ್ಯರಃ ಸಾಧಕೋ ವಧಃ ।**
**ಮೈತ್ರಂ ಪರಮಮೈತ್ರಂ ಚ ತಾರಾಸಂಜ್ಞಾಃ ಪ್ರಕೀರ್ತಿತಾಃ ॥ 26 ॥**

ಪ್ರತಿಯೊಂದು ಪರ್ಯಾಯದಿಂದಲೂ ಕ್ರಮವಾಗಿ ಜನ್ಮ, ಸಂಪತ್, ವಿಪತ್, ಕ್ಷೇಮ, ಪ್ರತ್ಯರ, ಸಾಧಕ, ವಧ, ಮೈತ್ರ, ಪರಮಮೈತ್ರ –ಎಂದು 9 ಸಂಜ್ಞೆಗಳು.

## ॥ ವಿಪತ್ ಪ್ರತ್ಯರ ವಧಾದಿ ದೋಷಗಳು ॥

**ಸರ್ವಾನೇವ ವಿಪತ್ತಿ ಪಂಚಮ ವಧೇಷ್ವಾದ್ಯೇಷು ಭೇಷ್ವಂಶಕಾನ್**
**ಮಧ್ಯೇಷ್ವಾದ್ಯತುರೀಯ ಪಾವಕಮಿತಾನಂತ್ಯೇಷು ವಾ ವರ್ಜಯೇತ್ ।**
**ಸತ್ಕರ್ಮಾ ಬಲವಾನ್ ಶುಭಾಂಶಕಗತೋ ದೃಷ್ಟಶ್ಚ ಸೌಮ್ಯೈರ್ಗ್ರಹೈಃ**
**ಜನ್ಮಪ್ರತ್ಯರಜಾನ್ ವಿಪದ್ವಧಭವಾನ್ ದೋಷಾನ್ ವಿಧುರ್ಬಾಧತೇ ॥ 27 ॥**

ಜನ್ಮ, ಅನುಜನ್ಮ, ತ್ರಿಜನ್ಮ –ಎಂದು ಜನ್ಮನಕ್ಷತ್ರಕ್ಕೆ 3 ಪರ್ಯಾಯಗಳು ಒಂದನೆ ಪರ್ಯಾಯದಿಂದ 3ನೆ, 5ನೆ ಮತ್ತ 7ನೆ ನಕ್ಷತ್ರಗಳನ್ನು ಪೂರ್ತಿಯಾಗಿ

ಬಿಡಬೇಕು. 2ನೆ ಪರ್ಯಾಯದಿಂದ, 3ನೆ ನಕ್ಷತ್ರಕ್ಕೆ ಮೊದಲ ಪಾದವನ್ನೂ, 5ನೆ ನಕ್ಷತ್ರಕ್ಕೆ ಕೊನೆಯ ಪಾದವನ್ನೂ, 7ನೆ ನಕ್ಷತ್ರಕ್ಕೆ 3ನೆ ಪಾದವನ್ನೂ ಬಿಡಬೇಕು. ಇದರಲ್ಲಿ 3ನೆ ಪರ್ಯಾಯದಲ್ಲಿ ದೋಷ ಬಹಳ ಕಡಮೆ ಎಂದು ಕೆಲವರ ಅಭಿಪ್ರಾಯ. ಜನ್ಮನಕ್ಷತ್ರವು ಕೆಲವಕ್ಕೆ ಉತ್ತಮ, ಕೆಲವಕ್ಕೆ ಮಧ್ಯಮವೆಂದು ಭೇದವಿದೆ. 3ನೆ ಪರ್ಯಾಯದಿಂದ 3, 5, 7ನೆ ನಕ್ಷತ್ರಗಳಲ್ಲಿ ಪಾಪಗ್ರಹಗಳ ಅಂಶಕಗಳನ್ನು ಬಿಡಬೇಕೆಂಬುದು ಕೇರಳದ ಆಚಾರ.

**ಜನ್ಮರ್ಕ್ಷಾತ್ ಪೂರ್ವನಕ್ಷತ್ರಂ ಸಪ್ತವಿಂಶತಿಮಂ ಭವೇತ್ ।**
**ಸರ್ವಕರ್ಮವಿನಾಶಃ ಸ್ಯಾತ್ ಚಂದ್ರೋ ವ್ಯಯಗತೋ ಯದಿ ॥ 28 ॥**

ಜನ್ಮನಕ್ಷತ್ರದ ಹಿಂದಿನ ನಕ್ಷತ್ರ ಕೂಡದು. ಚಂದ್ರನು ದ್ವಾದಶದಲ್ಲಿ ಇರಬಾರದು.

ಚಂದ್ರಕ್ರಿಯೆಯು ಶುಭವಾಗಿದ್ದು, ಚಂದ್ರನು ಶುಭಾಂಶಕದಲ್ಲಿದ್ದು ಸೌಮ್ಯ ಗ್ರಹದೃಷ್ಟನಾಗಿದ್ದರೆ ಜನ್ಮಾದಿ ನಕ್ಷತ್ರದೋಷಗಳು ಪರಿಹಾರವಾಗುತ್ತವೆ.

**ಸಪ್ತವಿಂಶತಿ ನಕ್ಷತ್ರಮೇಕರಾಶಿ ಸಮನ್ವಿತಮ್ ।**
**ಸರ್ವೇಷು ಶುಭದಂ ಪ್ರೋಕ್ತಂ ವಿವಾಹೋಪನಯಾದಿಷು ॥ 29 ॥**

27ನೆ ನಕ್ಷತ್ರ ಜನ್ಮರಾಶಿಯೇ ಆಗಿಬಂದರೆ ವಿವಾಹೋಪನಯನಾದಿಗಳಿಗೆ ಶುಭ. ಜನ್ಮದ ಪಾದದಿಂದ ಹಿಂದಿನ ಪಾದವನ್ನು ಬಿಟ್ಟರೂ ಸಾಕೆಂದಿದೆ.

**ಪ್ರಥಮೇ ಪ್ರಥಮಂ ವರ್ಜ್ಯಂ ದ್ವಿತೀಯೇ ಚ ತೃತೀಯಕಂ ।**
**ತೃತೀಯೇ ಪಂಚಮಂ ವರ್ಜ್ಯಂ ನೈಧನಂ ತ್ರಿಷು ವರ್ಜಯೇತ್ ॥ 30 ॥**

ಪ್ರಥಮ ಪರ್ಯಾಯದಲ್ಲಿ ಜನ್ಮನಕ್ಷತ್ರವನ್ನು ಬಿಡಬೇಕೆಂದೂ, 2ನೆ ಪರ್ಯಾಯದಲ್ಲಿ 3ನೆ ನಕ್ಷತ್ರವನ್ನು ಬಿಡಬೇಕೆಂದೂ, 3ನೆ ಪರ್ಯಾಯದಲ್ಲಿ 5ನೆ ನಕ್ಷತ್ರವನ್ನು ಬಿಡಬೇಕೆಂದೂ, 7ನೆ ನಕ್ಷತ್ರವನ್ನು 3 ಪರ್ಯಾಯಗಳಿಂದಲೂ ಬಿಡಬೇಕೆಂದೂ ಕೆಲವರು ಅಭಿಪ್ರಾಯಪಡುತ್ತಾರೆ.

**ಶಾಕಂ ಗುಡಂ ಚ ಲವಣಂ ಸತಿಲಂ ಕಾಂಚನಂ ಕ್ರಮಾತ್ ।**
**ದೇಯಾನಿ ದೋಷಹಾನಾಯ ನವವಸ್ತ್ರಯುತಾನಿ ಚ ॥ 31 ॥**

ಅನಿವಾರ್ಯ ಸಂದರ್ಭದಲ್ಲಿ ಜನ್ಮನಕ್ಷತ್ರದೋಷಕ್ಕೆ ಶಾಕ, ವಿಪನ್ನಕ್ಷತ್ರದೋಷಕ್ಕೆ ಗುಡ, ಪ್ರತ್ಯರೆಗೆ ಲವಣ, ವಧಕ್ಕೆ ತಿಲಯುಕ್ತ ಸ್ವರ್ಣದ್ರವ್ಯಗಳನ್ನು ವಸ್ತ್ರಸಮೇತ ದಾನಕೊಟ್ಟರೆ ದೋಷಪರಿಹಾರವಾಗುವುದು.

**ಮೃತ್ಯೌ ಸ್ವರ್ಣತಿಲಾನ್ ವಿಪದ್ಯಪಿ ಗುಡಂ ಶಾಕಂ ತ್ರಿಜನ್ಮಸ್ವಥೋ**
**ದದ್ಯಾತ್ ಪ್ರತ್ಯರಿತಾರಕಾಸು ಲವಣಂ ಸರ್ವೋ ವಿಪತ್ ಪ್ರತ್ಯರಿಃ ।**

**ಮೃತ್ಯುಶ್ಚಾದಿಮಪರ್ಯಯೇ ನ ಶುಭದೋ-**
**ಽಥೈಷಾಂ ದ್ವಿತೀಯೇಽಂಶಕಾನ್**

ಆದಿಪ್ರಾಂತ್ಯ ತೃತೀಯಕಾನಥ ಶುಭಾಃ
ಸರ್ವೇ ತೃತೀಯೇ ಸ್ಮೃತಾಃ ॥ 32 ॥

ಇನ್ನೊಂದು ಪಕ್ಷ

ವಧೆಗೆ ಸ್ವರ್ಣತಿಲಗಳು, ವಿಪತ್ತಿಗೆ ಗುಡ, ತ್ರಿಜನ್ಮಗಳಿಗೆ ಶಾಕ, ಪ್ರತ್ಯರೆಗೆ ಲವಣಗಳನ್ನು ದೋಷಪರಿಹಾರಕ್ಕಾಗಿ ದಾನಕೊಡಬೇಕು. ಮೊದಲ ಪರ್ಯಾಯ ದಿಂದ 3, 5, 7ನೆ ನಕ್ಷತ್ರಗಳನ್ನು ಬಿಡಬೇಕು. 2ನೆ ಪರ್ಯಾಯದಿಂದ ವಿಪತ್ತಿನ ಸುರುವಿನ ಪಾದ, ಪ್ರತ್ಯರೆಯ ಕೊನೆಯ ಪಾದ, ವಧೆಯ 3ನೆ ಪಾದಗಳನ್ನು ಬಿಡಬೇಕು. 3ನೆ ಪರ್ಯಾಯದಿಂದ ರಾಶಿಭೇದವಿರುವ ಕೊನೆಯ ನಕ್ಷತ್ರವನ್ನು ಬಿಟ್ಟು ಎಲ್ಲವೂ ಶುಭವೆಂದು ತಿಳಿಯಬೇಕು.

ಚಂದ್ರನಿಂದ ಅಷ್ಟಮರಾಶಿಯನ್ನು ಬಿಡಬೇಕು ಅಷ್ಟಮರಾಶಿಯ ನಕ್ಷತ್ರ ಗಳನ್ನೂ ಬಿಡಬೇಕೆಂದು ಕೆಲವರು, ಲಗ್ನಾಷ್ಟಮವನ್ನು ಬಿಡಬೇಕೆಂದು ಕೆಲವರ ಅಭಿಪ್ರಾಯವಿದೆ.

ಇಲ್ಲಿಯ ಬಹುವಿದ್ವಾಂಸರ ಅಭಿಪ್ರಾಯ ಪ್ರಕಾರ 3 ಪರ್ಯಾಯಗಳಿಂದಲೂ 3, 5, 7ನೆ ನಕ್ಷತ್ರಗಳನ್ನೂ ಜನ್ಮಾಷ್ಟಮಲಗ್ನವನ್ನೂ ಬಿಡಬೇಕು.

## ॥ ಸಾಮಾನ್ಯವಾಗಿ ವರ್ಜ್ಯನಕ್ಷತ್ರಾದಿಗಳು ॥

ಅಗ್ನ್ಯಂತಕದ್ವಿರಸನತ್ರಿದಶೇಶರುದ್ರಾಃ
ಪೂರ್ವಾತ್ರಯಂ ಚ ಬಹುಲಂ ಪಿತೃಮೂಲಶೂರ್ಪಾಃ ।
ಛಿದ್ರಾಶ್ಚ ಪಾಪದಿವಸಾಸ್ಪದಕಾಲಹೋರಾ–
ಸ್ತ್ಯಾಜ್ಯೋ ಗಣೋಽಯಮಖಿಲಾಸು ಶುಭಕ್ರಿಯಾಸು ॥ 33 ॥

ನಾಮಾನ್ಯವಾಗಿ ಶುಭಕಾರ್ಯಗಳೆಲ್ಲದಕ್ಕೂ ವರ್ಜ್ಯವಾದ ನಕ್ಷತ್ರಗಳು –ಕೃತ್ತಿಕೆ, ಭರಣಿ, ಆಶ್ಲೇಷ, ಆರ್ದ್ರೆ, ಜ್ಯೇಷ್ಠಾ, ಹುಬ್ಬೆ, ಪೂರ್ವಾಷಾಢಾ ಮತ್ತು ಪೂರ್ವಾ ಭಾದ್ರಾ. ಮಖಾ, ಮೂಲಾ ಮತ್ತು ವಿಶಾಖೆಗಳನ್ನು ಶುಭಕರ್ಮಗಳಲ್ಲಿ ಮಧ್ಯಮ ವಾಗಿ ಉಪಯೋಗಿಸಬಹುದು.

## ॥ ಛಿದ್ರಾತಿಥಿಗಳು ॥

ಚತುರ್ಥಿ, ಷಷ್ಠಿ, ಅಷ್ಟಮಿ, ನವಮಿ, ದ್ವಾದಶಿ, ಚತುರ್ದಶಿಗಳು. ಇದರಲ್ಲಿ ರಿಕ್ತಾತಿಥಿಗಳಿಗೆ ಹೆಚ್ಚು ನಿಷೇಧವಿದೆ

ರಿಕ್ತಾಖ್ಯಾಸ್ತಿಥಯೋ ವರ್ಜ್ಯಾ ಅಷ್ಟಮ್ಯಾ ಚ ವಿವರ್ಜಯೇತ್ ।
ನವಮೀ ಸರ್ವಥಾ ವರ್ಜ್ಯಾ ಪಕ್ಷಯೋರುಭಯೋರಪಿ ॥

ಎಂಬ ಪ್ರಮಾಣಾನುಸಾರ ರಿಕ್ತಾತಿಧಿಗಳಲ್ಲಿಯೂ ನವಮಿಗೆ ಹೆಚ್ಚು ದೋಷವನ್ನು ಹೇಳಿರುತ್ತಾರೆ.

'ಸಾಪವಾದೈರ್ನಿರಪವಾದೋ ಬಲೀಯಾನ್' ಎಂಬ ನ್ಯಾಯದಂತೆ, ಛಿದ್ರಾತಿಥಿಗಳಿಗೆ ಅಪವಾದವಿರುವುದರಿಂದಲೂ ಧರ್ಮಶಾಸ್ತ್ರಗಳಲ್ಲಿ ಛಿದ್ರಾತಿಥಿಗಳಿಗೆ ವಿಶೇಷ ನಿಷೇಧ ಕಾಣದಿರುವುದರಿಂದಲೂ ಮಧ್ಯಮವಾಗಿ ಚತುರ್ಥಿ, ಷಷ್ಠಿ, ದ್ವಾದಶಿಗಳನ್ನು ಉಪಯೋಗಿಸಬಹುದು. ಮುಹೂರ್ತಶಾಸ್ತ್ರದಲ್ಲಿ ಏಕಾದಶಿಗೆ ನಿಷೇಧವಿಲ್ಲದಿದ್ದರೂ ಅಮೃತಮಥನಕಾಲದಲ್ಲಿ ಶ್ರೀಲಕ್ಷ್ಮೀದೇವಿಯ ಅವತಾರಕ್ಕೆ ಮುಂಚಿತವಾಗಿ ಏಕಾದಶೀದಿವಸ ಬ್ರಹ್ಮಾದಿಗಳೂ ಉಪವಾಸಮಾಡಿ ಅಂದಿನಿಂದ ದೇವತೆಗಳೂ ಏಕಾದಶೀವ್ರತವನ್ನು ಆಚರಿಸುತ್ತಾರೆಂದು ಪ್ರಮಾಣವಿರುವುದರಿಂದ, ಆ ದಿವಸ ಶ್ರೀಮಹಾವಿಷ್ಣುವನ್ನುಳಿದು ಯಾವ ದೇವತೆಗಳಿಗೂ ಇಲ್ಲಿಯ ಸಂಪ್ರದಾಯಾನುಸಾರ ನಿವೇದ್ಯಾದಿಗಳಿಲ್ಲದಿರುವುದರಿಂದಲೂ ಶುಭಕಾರ್ಯಗಳನ್ನು ಮಾಡುವಾಗ ಅದರ ಅಂಗವಾಗಿ ಮಾಡುವ ದೇವತಾಪೂಜಾದಿಗಳಿಗೆ ಆ ದಿವಸ ನಿಷೇಧವಿರುವುದರಿಂದಲೂ ಏಕಾದಶಿಯನ್ನು ಬಿಡಬೇಕು

## ॥ ಏಕಾದಶೀವಿಷಯ ॥

ಶ್ರೀಕೃಷ್ಣಾಚಾರ್ಯಸ್ಮೃತಿ ಮುಕ್ತಾವಲಿ–

ರುದ್ರೇಣ ಸರ್ವದೇವೈಶ್ಚ ಆತ್ಮನಾ ಸರ್ವದೇಹಿಭಿಃ ।
ಏಕಾದಶ್ಯುಪವಾಸಸ್ತು ಕರ್ತವ್ಯೋ ನಾತ್ರ ಸಂಶಯಃ ॥

ಪಾದ್ಮೇ–

ಮಥ್ಯಮಾನೇ ತು ದುಗ್ಧಾಬ್ಧೌ ದೈವತೈಶ್ಚ ಮಹಾಬಲೈಃ ।
ಉತ್ಪಾದನಾರ್ಥಂ ಲಕ್ಷ್ಮ್ಯಾಶ್ಚ ತತ ಏತೇ ಮಹರ್ಷಯಃ ॥

ಉಪೋಷ್ಯ ನಿಯಮಂ ಕೃತ್ವಾ ಜಪ್ತಂ ಶ್ರೀಸೂಕ್ತಮುತ್ತಮಮ್ ।
ಸಹಸ್ರನಾಮಪಠನಂ ಚಕ್ರುರ್ದೇವಾ ದ್ವಿಜೋತ್ತಮಾಃ ॥

ತದಾ ಪ್ರಭೃತಿ ವೈ ಸರ್ವೇ ದೇವಾ ಬ್ರಹ್ಮಪುರೋಗಮಾಃ ।
ಋಷಯೋ ಮಾನುಷಾಶ್ಚೈವ ಯೋಗಿನೋ ಮುನಿಸತ್ತಮಾಃ ॥

ವಿಷ್ಣೋರಾಜ್ಞಾಂ ಪುರಸ್ಕೃತ್ಯ ಭಕ್ತ್ಯಾ ಪರಮಯಾನ್ವಿತಾಃ ।
ಏಕಾದಶ್ಯಾಂ ತು ಶುದ್ಧಾಯಾಮುಪೋಷ್ಯೈವ ಜನಾರ್ದನಮ್ ॥
ದ್ವಾದಶ್ಯಾಮರ್ಚಯಾಂಚಕ್ರುರ್ವಿಧಿನಾ ವರವರ್ಣಿನಿ ॥

ಪಿತ್ರೋಃ ಶ್ರಾದ್ಧಂ ನ ಕುರ್ವೀತ ಏಕಾದಶ್ಯಾಂ ದ್ವಿಜೋತ್ತಮ ।
ದ್ವಾದಶ್ಯಾಂ ತತ್ರ ಕುರ್ವೀತ ನೋಪವಾಸದಿನೇ ಕ್ವಚಿತ್ ॥

ದೇವಾನಾಂ ಚ ಋಷೀಣಾಂ ಚ ಪಿತೄಣಾಂ ಚ ವಿಶೇಷತಃ ।
ಅನ್ನಂ ನ ದದ್ಯಾತ್ ಕೃಷ್ಣಾಹೇ ಭಗವಂತಂ ಹರಿಂ ವಿನಾ ॥

## ।। ಪುಂಸವನಾದಿ ಸಂಸ್ಕಾರಗಳಿಗೆ ವಿಹಿತವಾದ ತಿಥಿಗಳು ।।

(ನಿರ್ಣಯಸಿಂಧುವಿಗೆ ಅನುಸಾರವಾಗಿ)

**ರಿಕ್ತಾಂ ಪರ್ವ ಚ ನವಮೀಂ ತ್ಯಕ್ತ್ವಾ ಪುಂಸವನೇ ಶುಭಾಃ ।। 34 ।।**

ಇಲ್ಲಿ ರಿಕ್ತೆಯಲ್ಲಿ ನವಮಿ ಸೇರಿದ್ದರೂ ದೋಷಾಧಿಕ್ಯ ಪ್ರದರ್ಶನಕ್ಕಾಗಿ ಪುನಃ ಹೇಳಿರುತ್ತಾರೆ.

**ಕೃಷ್ಣಾಷ್ಟಮೀ ಚತುರ್ದಶ್ಯಪ್ಯಮಾವಾಸ್ಯಾ ಚ ಪೂರ್ಣಿಮಾ ।**
**ಸಂಕ್ರಾಂತಿಃ ಪರ್ವತಿಥಯಃ ಶುಭಕರ್ಮಸು ವರ್ಜಿತಾಃ ।। 36 ।।**

ಕೃಷ್ಣಾಷ್ಟಮಿ, ಚತುರ್ದಶಿ, ಅಮಾವಾಸ್ಯೆ, ಪೂರ್ಣಿಮೆ, ಸಂಕ್ರಾಂತಿಗಳು ಪರ್ವಗಳು. ಇವುಗಳನ್ನು ಬಿಡಬೇಕು.

## ।। ಛಿದ್ರಾತಿಥಿಗಳು ನಿಷಿದ್ಧವಾಗಿದ್ದರೂ ಅದರಲ್ಲಿ ಕೆಲವು ಗಳಿಗೆ ಬಿಟ್ಟರೆ ಸಾಕು ಎಂದು ವಸಿಷ್ಠವಚನ ।।

**ಚತುರ್ದಶೀ ಚತುರ್ಥೀ ಚ ಅಷ್ಟಮೀ ನವಮೀ ತಥಾ ।**
**ಷಷ್ಠೀ ಚ ದ್ವಾದಶೀ ಚೈವ ಪಕ್ಷಚ್ಛಿದ್ರಾಹ್ವಯಾಃ ಸ್ಮೃತಾಃ ।। 36 ।।**

ಚತುರ್ಥೀ, ಷಷ್ಠೀ, ಅಷ್ಟಮೀ, ನವಮೀ, ದ್ವಾದಶೀ, ಚತುರ್ದಶೀ –ಈ ೬ ತಿಥಿಗಳು ಛಿದ್ರಾತಿಥಿಗಳೆನಿಸಿಕೊಂಡಿವೆ.

**ಕ್ರಮಾದೇತಾಸು ತಿಥಿಷು ವರ್ಜನೀಯಾಶ್ಚ ನಾಡಿಕಾಃ ।**
**ಭೂತಾಷ್ಟಮನುತತ್ತ್ವಾಂಕದಶಶೇಷಾಸ್ತು ಶೋಭನಾಃ ।। 37 ।।**

ಚತುರ್ಥೀ, ಷಷ್ಠೀ, ಅಷ್ಟಮೀ, ನವಮೀ, ದ್ವಾದಶೀ, ಚತುರ್ದಶೀ ತಿಥಿಗಳಲ್ಲಿ ಕ್ರಮವಾಗಿ ಮೊದಲ 8, 9, 14, 25, 10, 5 ಗಳಿಗೆಗಳನ್ನು ಬಿಟ್ಟು ಈ ತಿಥಿಗಳಲ್ಲಿ ಶುಭಕ್ರಿಯೆಗಳನ್ನು ಮಧ್ಯಮ ಪಕ್ಷದಲ್ಲಿ ಮಾಡಬಹುದು.

'ವಿನಾ ನವಮ್ಯಾ ಪರಮಾರ್ಥವಿದ್ಭಿಃ' ಎಂಬ ಶಾಸ್ತ್ರಾನುಸಾರ ನವಮಿಯನ್ನು ಪೂರ್ಣ ಬಿಡಬೇಕು. ಶುಕ್ಲಪಕ್ಷದಲ್ಲಿ ಚತುರ್ದಶೀ ಚತುರ್ಥೀ ಆಗಬಹುದೆಂದು ಬೃಹಸ್ಪತಿ ಮತ. ಚಂದ್ರನು ಅನುಕೂಲಸ್ಥನಾಗಿದ್ದರೆ ಚತುರ್ಥೀ, ಚತುರ್ದಶೀ, ಪೂರ್ಣಮಾಸಿ ಸೀಮಂತಕ್ಕೆ ಆಗಬಹುದೆಂದು ಕಾಲನಿರ್ಣಯ ಹೇಳುತ್ತದೆ.

ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ದಶಮೀ, ತ್ರಯೋದಶೀ, ಪೂರ್ಣಿಮಾ –ಉತ್ತಮ ತಿಥಿಗಳು. ಕೃಷ್ಣಪಾಡ್ಯ, ದ್ವಾದಶಿ ಮತ್ತು ಷಷ್ಠೀ ಮಧ್ಯಮ ಚತುರ್ಥೀ ಚತುರ್ದಶಿಗಳು ಅಧಮ ಎಂದು ತೀರ್ಮಾನಿಸಬಹುದು. ಕೃಷ್ಣಪಕ್ಷ ಚತುರ್ದಶಿ ತ್ಯಾಜ್ಯ.

ಪಾಪಗ್ರಹ ವಾರಗಳನ್ನೂ ಪಾಪಗ್ರಹಗಳ ಉದಯದೃಷ್ಟಿಗಳನ್ನೂ ಪಾಪಗ್ರಹಗಳ ಕಾಲಹೋರೆಗಳನ್ನೂ ಎಲ್ಲ ಶುಭಕಾರ್ಯಗಳಿಗೂ ಬಿಡಬೇಕು.

## ॥ ಗ್ರಹಣಾದಿ ನಿತ್ಯನೈಮಿತ್ತಿಕ ದೋಷಗಳು ॥

ಉಪರಾಗಂ ಸಂಕ್ರಮಂ ಚ ಅಷ್ಟಮೇಂದ್ವಪರಾಹ್ಣಕೇ ।
ಮೌಢ್ಯಂ ಬಾಲ್ಯಂ ಚ ವಾರ್ಧಕ್ಯಂ ಶುಕ್ರದೇವೇಡ್ಯಮಂತ್ರಿಣೋಃ ॥ 38 ॥

ಮಲಮಾಸಂ ಚ ಗಂಡಾಂತಂ ಆರ್ದ್ರಾದ್ಯೃಕ್ಷೇ ರವಿಂ ತಥಾ ।
ವರ್ಜಯೇಚ್ಛುಭಕಾರ್ಯೇಷು ಉತ್ಪಾತೇ ಹ್ಯುತ್ಸವಾದಿಷು ॥ 39 ॥

## ॥ ಗ್ರಹಣ ॥

'ಸೂರ್ಯೇಂದ್ವೋರ್ಗ್ರಹಣೇ ದೃಷ್ಟೇ ವರ್ಜಯೇದ್ದಿವಸತ್ರಯಂ'

ಎಂಬ ಪ್ರಮಾಣಾನುಸಾರ ಗ್ರಹಣ ದಿವಸವನ್ನೂ ಅನಂತರ 3 ದಿವಸಗಳನ್ನೂ ಶುಭಕಾರ್ಯಗಳಿಗೆ ವರ್ಜಿಸಬೇಕು.

'ಪಕ್ಷಗ್ರಹಣಮಧ್ಯೇ ತು' ಎಂಬ ಪ್ರಮಾಣಾನುಸಾರ ಅಮಾವಾಸ್ಯೆ ಹುಣ್ಣಿಮೆ ಎರಡರಲ್ಲಿಯೂ ಗ್ರಹಣವಿದ್ದರೆ ಆ ಪಕ್ಷದಲ್ಲಿ ಯಾವ ಶುಭಕಾರ್ಯವೂ ಕೂಡದು.

## ॥ ಸಂಕ್ರಮಣ ॥

ಸಂಕ್ರಮಣಗಳು 4 ವಿಧ. ವಿಷ್ಣುಪದಿ, ಷಡಶೀತಿ, ವಿಷುವ, ಅಯನವೆಂದು. ಈ 4 ವಿಧದ ಸಂಕ್ರಮಣಗಳಿಗೆ ಪೂರ್ವಾಪರ 6-6 ದಿನಗಳಿಂದ ಒಂದೊಂದು ದಿನದ ವರೆಗೆ ಬಿಡಬೇಕೆನ್ನುವಂತಹ ಹಲವಾರು ಭಿನ್ನಭಿನ್ನವಾದ ಪ್ರಮಾಣಗಳಿವೆ. 'ಮಾಸಾಬ್ದಾವಸತೀಃ' ಎಂಬ ಪ್ರಮಾಣಾನುಸಾರ ಸಂಕ್ರಮಣದ ಪೂರ್ವದಿವಸವನ್ನೂ ಸಂಕ್ರಮಣದಿವಸವನ್ನೂ 'ನಿರಂಶೇ ಚೈವ ಭಾಸ್ಕರೇ' ಎಂಬ ಪ್ರಮಾಣಾನುಸಾರ ಸಂಕ್ರಮಣದ ಮಾರನೆ ದಿನವನ್ನೂ ಬಿಡುವುದು ಇಲ್ಲಿಯ ಸಾಮಾನ್ಯ ಸಂಪ್ರದಾಯ.

## ॥ ಅಷ್ಟಮಚಂದ್ರ ॥

ಅಷ್ಟಮಚಂದ್ರನನ್ನು ಬಿಡಲೇಬೇಕು. ಕೆಲವರು ಷಷ್ಠದ್ವಾದಶಚಂದ್ರನನ್ನೂ ಬಿಡುತ್ತಾರೆ. 'ಷಷ್ಠಾಷ್ಟಮಾಂತ್ಯೇಂದು' ಎಂದು ಹೇಳಿರುವುದರಿಂದ ಸಾಧ್ಯವಾದರೆ ಷಷ್ಠ ಅಷ್ಟಮ ದ್ವಾದಶಗಳ ಚಂದ್ರನನ್ನು ವರ್ಜಿಸುವುದು ಉತ್ತಮ.

## ॥ ಅಪರಾಹ್ಣ ॥

ಷಡ್ಭಿಃ ಸೂರ್ಯಸ್ಯೋದಯಾನ್ನಾಡಿಕಾಭಿಃ
ಪ್ರಾತಃಕಾಲಾತ್ ಸಂಗವಶ್ಚಾಥ ಷಡ್ಭಿಃ ।

ಮಧ್ಯಾಹ್ನಾಖ್ಯಸ್ತದ್ವದಸ್ಮಾದಪರಾಹ್ಣಃ
ಸಾಯಂಕಾಲಶ್ಚಾತ್ರ ನಿಂದ್ಯೌ ಪರೌ ದ್ವೌ ॥ 40 ॥

ಸೂರ್ಯೋದಯದಿಂದ 6 ಗಳಿಗೆ ಪ್ರಾತಃಕಾಲ, ಅನಂತರ 6 ಗಳಿಗೆ ಸಂಗವ, ಮತ್ತೆ 6 ಗಳಿಗೆ ಮಧ್ಯಾಹ್ನ, ಅನಂತರದ 12 ಗಳಿಗೆಗಳು ಅಪರಾಹ್ಣ ಮತ್ತು ಸಾಯಾಹ್ನ. ಇದರಲ್ಲಿ ಕೊನೆಯ ಅಪರಾಹ್ಣ ಮತ್ತು ಸಾಯಾಹ್ನಗಳನ್ನು ಬಿಡಬೇಕು.

## ॥ ಮೌಢ್ಯ ॥

ಎಲ್ಲ ಶುಭಕಾರ್ಯಗಳಿಗೂ ಗುರುಶುಕ್ರರ ಮೌಢ್ಯ ಕೂಡದು. ಆದರೆ ಇದಕ್ಕೆ ಹಲವಾರು ಅಪವಾದಗಳಿವೆ–

ಏಕೋ ಮೂಢೋ ಭವೇದನ್ಯಃ ಸ್ವೋಚ್ಚಮಿತ್ರಾಂಶಗೋ ಯದಿ ।
ಸ್ವರಾಶ್ಯಂಶಗತಶ್ಚೈವ ಮೌಢ್ಯದೋಷೋ ನ ವಿದ್ಯತೇ ॥ 41 ॥

ಒಬ್ಬ ಗ್ರಹನು ಮೂಢನಾಗಿದ್ದು ಇನ್ನೊಬ್ಬ ಗ್ರಹ ಸ್ವಕ್ಷೇತ್ರ, ಉಚ್ಚ, ಮಿತ್ರಕ್ಷೇತ್ರ ಅಥವಾ ಸ್ವಕ್ಷೇತ್ರಾದಿ ಅಂಶಗಳಲ್ಲಿದ್ದರೂ ಮೂಢಗ್ರಹನು ಸ್ವರಾಶಿ ಅಥವಾ ಸ್ವಾಂಶಗಳಲ್ಲಿದ್ದರೂ ಮೌಢ್ಯದೋಷವಿರುವುದಿಲ್ಲ.

ದ್ವಯೋರ್ಮೂಢತ್ವಮೇವೋಕ್ತಂ ದೋಷದಂ ಗುರುಶುಕ್ರಯೋಃ ॥ 42 ॥

ಇಬ್ಬರಿಗೂ ಮೌಢ್ಯವಿದ್ದರೆ ಮಾತ್ರ ಶುಭಕಾರ್ಯ ಮಾಡಬಾರದೆಂದು ಹೇಳುತ್ತಾರೆ

ಅತಿಪಾತಿಷು ಕಾರ್ಯೇಷು ರಾಜ್ಞಾಂ ತತ್ಕರ್ಮಚಾರಿಣಾಂ ।
ವಿವಾಹಾದೀನಿ ಕಾರ್ಯಾಣಿ ಮೌಢ್ಯೇಽಪಿ ಗುರುಶುಕ್ರಯೋಃ ॥ 43 ॥

ಅತ್ಯಾವಶ್ಯಕ ಸಂದರ್ಭಗಳು ಒದಗಿದಾಗ ವಿವಾಹಾದಿ ಕಾರ್ಯಗಳನ್ನು ಗುರುಶುಕ್ರ ಮೌಢ್ಯದಲ್ಲಿಯೂ ಪರಿಹಾರ ಮಾಡಿ ಮಾಡಬಹುದು.

ಶಾಂತಿಂ ಕೃತ್ವಾ ತಯೋಸ್ತದ್ವಚ್ಛುಕ್ರದೇವೇಡ್ಯಮಂತ್ರಿಣೋಃ ।
ಹೋಮೈರ್ದಾನೈರ್ಜಪೈರ್ವಾಪಿ ತಯೋರುದಿತಮಂತ್ರಕೈಃ ॥ 44 ॥

ಅನಿವಾರ್ಯವಾದರೆ ಹೋಮದಾನ ಜಪಪುರಸ್ಸರ ಮೌಢ್ಯಯುಕ್ತಗ್ರಹದ ಶಾಂತಿಯನ್ನು ಮಾಡಿ ವಿವಾಹಾದಿ ಶುಭಕಾರ್ಯಗಳನ್ನು ಮಾಡಬಹುದು

ಮೂಢೋ ಗುರುಃ ಸದಾ ವರ್ಜ್ಯಃ ಬ್ರಾಹ್ಮಣಸ್ಯೋಪನಾಯನೇ ।
ಬ್ರಾಹ್ಮೋದ್ವಾಹೇ ತು ಶುಕ್ರಸ್ಯ ಅಸ್ತಕಾಲೋ ವಿವರ್ಜ್ಯತೇ ॥ 45 ॥

ಇದೊಂದು ಪಕ್ಷಾಂತರ– ಉಪನಯನಕ್ಕೆ ಗುರುಮೌಢ್ಯವನ್ನು ಬಿಡಲೇಬೇಕು. ಬ್ರಾಹ್ಮವಿವಾಹಕ್ಕೆ ಶುಕ್ರಮೌಢ್ಯ ಕೂಡದು.

ಈ ಪ್ರಮಾಣಗಳೆಲ್ಲಾ ಅನಿವಾರ್ಯ ಸಂದರ್ಭದಲ್ಲಿ ಮಾತ್ರ ಯೋಜ್ಯ ಸಾಮಾನ್ಯವಾಗಿ ಗುರುಶುಕ್ರರಿಬ್ಬರ ಮೌಢ್ಯದಲ್ಲಿ ಯಾವ ಶುಭಕಾರ್ಯಗಳೂ ಕೂಡದು ಮೌಢ್ಯ ಹಾಗೂ ಬಾಲ್ಯವಾರ್ಧಕ್ಯಗಳೆರಡನ್ನೂ ಕಡ್ಡಾಯವಾಗಿ ಬಿಡಲೇ ಬೇಕೆಂದು ಪರಂಪರೆಯಿಂದಲೇ ಜ್ಯೋತಿಷವಿದ್ವಾಂಸರಾದ ಶ್ರೀ ರಾಜಗೋಪಾಲ ಬಲ್ಲಾಳರು ತಿಳಿಸಿರುತ್ತಾರೆ.

## ॥ ಗುರುಶುಕ್ರರ ಬಾಲ್ಯ ವಾರ್ಧಕ್ಯಗಳು ॥

ಪಶ್ಚಾತ್ ಪ್ರಾಗುದಿತಃ ಶುಕ್ರೋ ದಶತ್ರಿದಿವಸಾಚ್ಛಿಶುಃ ।
ವೃದ್ಧಃ ಪಂಚದಿನಂ ಪಕ್ಷಂ ಗುರುಃ ಪಕ್ಷಂ ತು ಸರ್ವತಃ ॥ 46 ॥

ತಾರಾಗ್ರಹಗಳಿಗೆ ಮೌಢ್ಯ ಮುಗಿದ ಅನಂತರ ಬಾಲ್ಯಾವಸ್ಥೆಯೂ ಮೌಢ್ಯಕ್ಕೆ ಮೊದಲು ವಾರ್ಧಕ್ಯವೂ ಇರುತ್ತದೆ.

ಪಶ್ಚಾದುದಯವಾದರೆ ಶುಕ್ರನಿಗೆ 10 ದಿನ ಬಾಲ್ಯ, ಪ್ರಾಗುದಯವಾದರೆ 3 ದಿವಸ ಬಾಲ್ಯ ಪಶ್ಚಾದಸ್ತನಾದರೆ 5 ದಿನ, ಪ್ರಾಗಸ್ತನಾದರೆ 15 ದಿನ ವಾರ್ಧಕ್ಯ ವಾಗಿರುತ್ತದೆ ಗುರುವಿಗೆ 15-15 ದಿನ ಬಾಲ್ಯ ವಾರ್ಧಕ್ಯಗಳು.

ಪಶ್ಚಾದಭ್ಯುದಿತೋ ಬಾಲೋ ದಶಾಹಂ ಪ್ರಾಗ್‌ದಿನತ್ರಯಂ ।
ಪಕ್ಷಂ ವೃದ್ಧಸ್ತು ಪೂರ್ವೇ ಚ ಪಂಚಾಹಂ ಪಶ್ಚಿಮೇ ಸ್ಥಿತಃ ॥ 47 ॥

ಗುರುವಿಗೆ ಪಶ್ಚಾದುದಯವಾದರೆ 10 ದಿವಸ, ಪ್ರಾಗುದಯವಾದರೆ 3 ದಿವಸ ಬಾಲ್ಯ ಪೂರ್ವಾಸ್ತವಾದರೆ 15 ದಿವಸ, ಪಶ್ಚಾದಸ್ತವಾದರೆ 5 ದಿವಸ ವಾರ್ಧಕ್ಯ.

ಪ್ರಾಕ್ ಪಶ್ಚಾದುದಿತಂ ರವೇರ್ಭೃಗುಗುರೂ ಬಾಲಂ ವದಂತಿ ಕ್ರಮಾತ್
ಬಾಣದ್ವೀಪವನಾನಿ ವೃದ್ಧಮನಯೋರಸ್ತೇ ದಿನವ್ಯತ್ಯಯಾತ್ ।
ಉದ್ವಾಹೇ ಕ್ರಮಶೋಽಂಗನಾ ಪುರುಷಯೋರ್ಹಂತಾ ಸ ಏವಂ ಗುರುಃ
ಸರ್ವೇಷಾಂ ಚ ತಯೋಃ ಶಿಶುಸ್ಥವಿರತಾ ವಿದ್ವೇಷಣೇ ಕರ್ಮಣಾಮ್ ॥ 48 ॥

ಗುರುಶುಕ್ರರಿಗೆ ಪ್ರಾಗುದಯವಾದರೆ 5 ದಿನ, ಪಶ್ಚಾದುದಯವಾದರೆ 7 ದಿನ ಬಾಲ್ಯ ಪ್ರಾಗಸ್ತವಾದರೆ 7 ದಿನ, ಪಶ್ಚಾದಸ್ತವಾದರೆ 5 ದಿನ ವೃದ್ಧತ್ವ. ಈ ಬಾಲ್ಯವಾರ್ಧಕ್ಯಗಳು ಕರ್ಮದ ಶುಭಫಲಗಳನ್ನೆಲ್ಲಾ ನಾಶಮಾಡುತ್ತವೆ ನಿರ್ಣಯ ಸಿಂಧುವಿನಲ್ಲಿ ಇದರ ಬಗ್ಗೆ ದೇಶಾಚಾರವ್ಯವಸ್ಥೆಯನ್ನು ನಿರೂಪಿಸಿದ್ದಾರೆ.

ಶುಕ್ರೋ ಗುರುಃ ಪ್ರಾಕ್ ಚ ಪರಾಕ್ ಚ ಬಾಲೋ
ವಿಂಧ್ಯೇ ತಥಾವಂತಿಷು ಸಪ್ತರಾತ್ರಮ್ ।
ವಂಗೇಷು ಹೂಣೇಷು ಚ ಷಟ್ ಚ ಪಂಚ
ಶೇಷೇ ಚ ದೇಶೇ ತ್ರಿದಿನಂ ವದಂತಿ ॥ 49 ॥

ಎಂಬ ಪ್ರಮಾಣಾನುಸಾರ ಬಾಲ್ಯ, ವೃದ್ಧತ್ವ ಎರಡಕ್ಕೂ ಈ ಪ್ರದೇಶದಲ್ಲಿ 3-3 ದಿನ ಬಿಟ್ಟರೆ ಸಾಕೆಂದು ತೋರುತ್ತದೆ. ಈ ಪಕ್ಷವೇ ಹೆಚ್ಚು ಉತ್ತಮ.

ಗುರುಶುಕ್ರರ ಬಾಲ್ಯ ವಾರ್ಧಕ್ಯಗಳು ದಿನಮಾಸ ಕಾರ್ಯಗಳಲ್ಲದ ಶುಭ ಕಾರ್ಯಗಳಿಗೆ ಮಾತ್ರ ವರ್ಜ್ಯ.

## ॥ ಮಲಮಾಸ ॥

**'ಅಸಂಕ್ರಾಂತೋ ದ್ವಿಸಂಕ್ರಾಂತೋ ವಾ ಚಾಂದ್ರೋ ಮಾಸಃ ಮಲಮಾಸಃ'**

ಸಂಕ್ರಾಂತಿ ಇಲ್ಲದ ಚಾಂದ್ರಮಾಸ (ಅಧಿಕಮಾಸ), 2 ಸಂಕ್ರಾಂತಿಗಳಿರುವ ಚಾಂದ್ರಮಾಸ (ಅಂಹಸ್ಪತಿ) –ಈ 2ಕ್ಕೂ ಮಲಮಾಸವೆಂದು ಹೆಸರು. ಈ ಮಾಸಗಳಲ್ಲಿ ದಿನಮಾಸಕಾರ್ಯೇತರ ಶುಭಕಾರ್ಯಗಳು ವರ್ಜ್ಯ.

## ॥ ಗಂಡಾಂತ ॥

**ಅಶ್ವಿನೀ ಮಘಾಮೂಲಾ ಪ್ರಥಮ ಪಾದೋ ಗಂಡಾಂತಃ ।**
**ಆಶ್ಲೇಷಾ ಜ್ಯೇಷ್ಠಾ ರೇವತ್ಯಂತ್ಯಪಾದಶ್ಚ ಗಂಡಾಂತಃ ॥ 50 ॥**

ಅಶ್ವಿನೀ, ಮಘಾ, ಮೂಲಾ ಈ ನಕ್ಷತ್ರಗಳ ಮೊದಲ ಪಾದಗಳೂ; ಆಶ್ಲೇಷಾ, ಜ್ಯೇಷ್ಠಾ, ರೇವತಿಗಳ ಕೊನೆ ಪಾದಗಳೂ ಗಂಡಾಂತ ಪಾದಗಳಾಗಿರುತ್ತವೆ. ಇವು ಸರ್ವಕಾಲಕ್ಕೂ ವರ್ಜ್ಯ. ಮೊದಲ ಮತ್ತು ಕೊನೆಯ 5-5 ಗಳಿಗೆ ಬಿಟ್ಟರೂ ಸಾಕೆಂಬ ಪಕ್ಷಾಂತರವಿದೆ.

## ॥ ಆರ್ದ್ರಾದಿ ರವಿಪ್ರವೇಶಕಾಲ ॥

**ನ ಕದಾಚಿದ್ದಶರ್ಕ್ಷೇಷು ಭಾನೋರಾರ್ದ್ರಾಪ್ರವೇಶನಾತ್ ।**
**ವಿವಾಹಂ ದೇವತಾನಾಂ ಚ ಪ್ರತಿಷ್ಠಾಂ ಚೋಪನಾಯನಮ್ ॥ 51 ॥**

ಆರ್ದ್ರೆ ಮೊದಲುಗೊಂಡು ಸ್ವಾತಿಯ ವರೆಗೆ ಸೂರ್ಯಸಂಚಾರದ ಕಾಲದಲ್ಲಿ ವಿವಾಹ, ದೇವಪ್ರತಿಷ್ಠೆ, ಉಪನಯನಗಳನ್ನು ಮಾಡಬಾರದು.

## ॥ ಉತ್ಸವಾದಿಕಾಲ ॥

**ಅಪ್ರಬುದ್ಧೋ ಹೃಷೀಕೇಶೋ ಯಾವತ್ತಾವನ್ನ ಮಂಗಲಮ್ ।**
**ಉತ್ಸವೇ ವಾಸುದೇವಸ್ಯ ದಿವಸೇನಾನ್ಯಮಂಗಲಮ್ ॥ 52 ॥**

ಶ್ರೀಮಹಾವಿಷ್ಣುವಿನ ಶಯನೋತ್ಸವದಿಂದ ಪ್ರಬೋಧೋತ್ಸವದ ವರೆಗೆ ಉಪನಯನ, ವಿವಾಹ, ದೇವಪ್ರತಿಷ್ಠೆಗಳನ್ನು ಮಾಡಬಾರದು.

'ಯಸ್ಮಿನ್ ದೇವ ನೃಪೋತ್ಸವಾದಿವಿವಿಧೋತ್ಪಾತಾಶ್ಚ ತಂ ವಾಸರಂ' ಆಯಾ ಗ್ರಾಮಗಳ ದೇವೋತ್ಸವಾದಿ ಸಂದರ್ಭಗಳಲ್ಲಿ (ಧ್ವಜಾರೋಹಣಾದಿ ಧ್ವಜಾವ

ರೋಹಣಪರ್ಯಂತ) ಶುಭಕಾರ್ಯ ಕೂಡದು. ಭೂಕಂಪಾದಿ ಉತ್ಪಾತ ಸಮಯಗಳಲ್ಲಿಯೂ ಶುಭಕಾರ್ಯ ಕೂಡದು.

ಇನ್ನೂ ಹಲವಾರು ಪಕ್ಷಾಂತರಗಳು, ವಿವಿಧ ದುರ್ಯೋಗಗಳೂ, ಗಣಿತಪ್ರತಿಪಾದ್ಯಗಳಾದ ಲಾಡವೈಧೃತ ಏಕಾರ್ಗಲಾದಿಗಳು ವರ್ಜ್ಯಗಳಾಗಿವೆ. ಅವನ್ನು ವಿಸ್ತಾರಭಯದಿಂದ ಇಲ್ಲಿ ತಿಳಿಸುವುದಿಲ್ಲ. ಮುಹೂರ್ತಮಾಧವೀಯ, ಮುಹೂರ್ತದೀಪಿಕಾ, ಮುಹೂರ್ತಪದವೀ, ಮಹೂರ್ತಚಿಂತಾಮಣಿ, ಶ್ರೀಮುಹೂರ್ತಸಂಹಿತಾ –ಮೊದಲಾದ ಗ್ರಂಥಗಳಲ್ಲಿ ಅವು ವಿಸ್ತಾರವಾಗಿ ವಿವೇಚಿತವಾಗಿವೆ. ಈ ಊರಿನಲ್ಲಿ ಅದನ್ನು ಹೆಚ್ಚಾಗಿ ಗಮನಿಸುವ ರೂಢಿ ಕಾಣುವುದಿಲ್ಲ.

**॥ ಇತಿ ಮುಹೂರ್ತಸನ್ಮಾರ್ಗದರ್ಶಿನ್ಯಾಂ**
**ನಿತ್ಯದೋಷಾದಿ ಪರಿಶೀಲನಾಧ್ಯಾಯಃ ದ್ವಿತೀಯಃ ॥**

* * *

# ॥ ಅಥ ಸಾಮಾನ್ಯ ಮುಹೂರ್ತಚಿಂತನಯುಕ್ತ ಬಲಾಬಲಾದಿ ನಿರೂಪಣಾಧ್ಯಾಯಃ ॥ 3 ॥

## ॥ ದೋಷಗಳ ಬಲಾಬಲ ॥

ಬಲಾವಬೋಧೇನ ವಿನಾ ನ ಕಶ್ಚಿತ್
ವಿಪಶ್ಚಿದಾದೇಷ್ಟುಮಲಂ ಮುಹೂರ್ತಮ್ ।
ನಿಸರ್ಗಜಾದೀನಿ ತತೋಽಭಿಧಾಸ್ಯೇ
ಕ್ರಮೇಣ ಸಪ್ತಾಂಗಬಲಾಬಲಾನಿ ॥ 1 ॥

ಯಾವ ಜ್ಯೋತಿಷಿಯೂ ನೈಸರ್ಗಿಕವಾದ ತಿಥಿಕರಣಾದಿಗಳ ಬಲಾಬಲವನ್ನು ತಿಳಿಯದೆ ಉತ್ತಮ ಮುಹೂರ್ತವನ್ನು ಸ್ಪಷ್ಟವಾಗಿ ನಿರ್ದೇಶಿಸಲು ಶಕ್ತನಾಗುವುದಿಲ್ಲ. ಆದ್ದರಿಂದ ಇನ್ನು ಮುಂದಕ್ಕೆ ಸಪ್ತಾಂಗಗಳ ಬಲಾಬಲಗಳನ್ನು ಕ್ರಮವಾಗಿ ನಿರೂಪಿಸಲಾಗುವುದು.

ವಸಿಷ್ಠನಾರದೇಡ್ಯಾದಿ ಪ್ರೋಕ್ತೈರೇವ ಹಿ ಶಕ್ಯತೇ ।
ಶಾಸ್ತ್ರೈರ್ಗುಣಾನಾಂ ದೋಷಾಣಾಮಪಿ ಜ್ಞಾತುಂ ಬಲಾಬಲಮ್ ॥ 2 ॥

ವಸಿಷ್ಠ, ನಾರದರು, ಬೃಹಸ್ಪತಿ ಮೊದಲಾದ ಋಷಿಗಳು ಅತಿವಿಸ್ತಾರವಾಗಿ ನಿರೂಪಿಸಿರುವ ಶಾಸ್ತ್ರಗಳಿಂದ ಮಾತ್ರ ಗುಣದೋಷಗಳ ಬಲಾಬಲವನ್ನು ತಿಳಿಯಲು ಸಾಧ್ಯ.

ಕಲಾವದೋಷಃ ಕಾಲೋ ನ ಮಂದಭಾಗ್ಯೋ ಯತೋ ಜನಃ ।
ದೋಷೇಽಲ್ಪೇಽತೋ ಬಹುಗುಣೇ ಕರ್ಮ ಕುರ್ವಂತಿ ಮಾನವಾಃ ॥ 3 ॥

ಜನರು ಭಾಗ್ಯಹೀನರಾದುದರಿಂದ ಕಲಿಯುಗದಲ್ಲಿ ದೋಷವೇ ಇಲ್ಲದ ಗುಣಪರಿಪೂರ್ಣವಾದ ಯಾವ ಮುಹೂರ್ತವೂ ಸಿಕ್ಕುವುದಿಲ್ಲ. ಆದ್ದರಿಂದ ದೋಷಗಳು ಕಡಮೆ ಇದ್ದು ಹೆಚ್ಚು ಗುಣಗಳಿರುವ ಮುಹೂರ್ತದಲ್ಲಿ ಮನುಷ್ಯರು ಸಂಸ್ಕಾರಾದಿಗಳನ್ನು ಮಾಡುತ್ತಾರೆ

ಪಂಚಾಂಗಶುದ್ಧಿರಹಿತೋ ದೋಷಸ್ತ್ವಾದ್ಯಃ ಪ್ರಕೀರ್ತಿತಃ ।
ಉದಯಾಸ್ತ ಶುದ್ಧಿಹೀನಶ್ಚ ದ್ವಿತೀಯಃ ಸಂಪ್ರಕೀರ್ತಿತಃ ॥ 4 ॥

ಮುಹೂರ್ತ ನೋಡುವಾಗ ಮುಖ್ಯವಾಗಿ ಬೇಕಾದ್ದು ಪಂಚ ಅಂಗಗಳ ಶುದ್ಧಿ. ಪಂಚ ಅಂಗಗಳು –ತಿಥಿ, ಕರಣ, ಯೋಗ, ವಾರ, ತಾರೆಗಳು. ಈ ಪಂಚಾಂಗಶುದ್ಧಿ ಇದ್ದ ದಿನ ಸಿಕ್ಕಿದ ಮೇಲೆ ಲಗ್ನಶುದ್ಧಿ ಮತ್ತು ಸಪ್ತಮದ ಶುದ್ಧಿ.

**ವಿಶಿಷ್ಟ ವಿಪ್ರಭಾಷಿತಂ ಶುಭಗ್ರಹಸ್ಯ ಚೋದಯಃ ।**
**ತನೋಶ್ಚ ಸೌಮ್ಯವರ್ಗತಾ ತ್ರಯೋ ಮಹಾಗುಣಾಃ ಸ್ಮೃತಾಃ ॥**

2ನೆ ಅಧ್ಯಾಯದಲ್ಲಿ ಹೇಳಿರುವ ಗುಣಗಳಿರುವ ದೈವಜ್ಞನು ದೇವತಾ ಪ್ರಾರ್ಥನೆ ಮಾಡಿ ಶಾಸ್ತ್ರಪ್ರಕಾರ ವಿಧಿಸಿರುವ ಮುಹೂರ್ತವು ಸನ್ಮುಹೂರ್ತ. ಅದರಲ್ಲಿ ಶುಭೋದಯವಿದ್ದರೆ ಉತ್ತಮ. ಷಡ್ವರ್ಗಗಳಲ್ಲಿಯೂ ಶುಭಯೋಗದೃಷ್ಟಿ ಸಂಪರ್ಕಗಳೇ ತುಂಬಿದ್ದರೆ ಅತ್ಯುತ್ತಮ.

**ಅನಾಪದ್ಯುತ್ತಮಃ ಕಾಲೋ ಮಧ್ಯಮಾಪದಿ ಮಧ್ಯಮಃ ।**
**ಅಧಮೋಽತ್ಯಾಪದಿ ಗ್ರಾಹ್ಯೋ ದುಷ್ಟೋಽಪಿ ಸ್ವಾಪವಾದತಃ ॥ 6 ॥**

ಯಾವ ತೊಂದರೆಯೂ ಇಲ್ಲದೆ ಅನುಕೂಲವಾದ ಸಮಯದಲ್ಲಿ ಉತ್ತಮ ಮುಹೂರ್ತವನ್ನು ಆರಿಸಬೇಕು ಆಪತ್ತುಗಳಿದ್ದು ಬೇಗನೆ ಮಾಡಬೇಕಾದ ಸಂದರ್ಭ ಗಳಿದ್ದರೆ ಮಧ್ಯಮ ಮುಹೂರ್ತ. ಅನಿವಾರ್ಯ ಸಂದರ್ಭಗಳಲ್ಲಿ ಅಧಮ ಮುಹೂರ್ತವನ್ನು ಆರಿಸಬಹುದು. ಮುಹೂರ್ತವು ದುಷ್ಟವಾಗಿದ್ದರೂ ಸ್ವಾಪವಾದ ದಿಂದ ದೋಷ ಹೋಗುವಂತಿದ್ದರೆ ಆ ಮುಹೂರ್ತದಲ್ಲಿ ಸಂಸ್ಕಾರಾದಿಗಳನ್ನು ಮಾಡಬಹುದು.

ಮುಹೂರ್ತವು ಸಿಕ್ಕದೆ ಯಾವ ದೈವಿಕ ಧಾರ್ಮಿಕ ಸಾಂಸ್ಕಾರಿಕ ಕ್ರಿಯಾಕಲಾಪ ಗಳೂ ನಿಂತುಹೋಗಬಾರದೆಂದು ತಾತ್ಪರ್ಯ.

**ದುರ್ಭಿಕ್ಷೇ ರಾಷ್ಟ್ರವಿಭ್ರಂಶೇ ಪಿತ್ರೋರ್ವಾ ಪ್ರಾಣಸಂಶಯೇ ।**
**ಪ್ರೌಢಾಯಾಮಪಿ ಕನ್ಯಾಯಾಂ ನ ಹಿ ಕಾಲಃ ಪ್ರತೀಕ್ಷ್ಯತೇ ॥ 7 ॥**

ದುರ್ಭಿಕ್ಷದಲ್ಲಿ, ರಾಷ್ಟ್ರಭ್ರಂಶದಲ್ಲಿ, ಮಾತಾಪಿತೃಗಳ ಪ್ರಾಣಾಂತಿಕ ಸಮಯ ದಲ್ಲಿ, ಕನ್ಯೆಗೆ ಪ್ರೌಢತ್ವ ಪ್ರಾಪ್ತವಾಗುವ ಸಂಭವವಿದ್ದಲ್ಲಿ, ಸಾಧ್ಯವಿದ್ದಷ್ಟು ದೋಷ ಕಡಮೆ ಇರುವ ಸಾಧ್ಯವಿದ್ದಷ್ಟು ಗುಣಗಳು ಹೆಚ್ಚಿರುವ ಮುಹೂರ್ತವನ್ನು ಆರಿಸ ಬೇಕು.

ಇಂತಹ ಸಂದರ್ಭಗಳಲ್ಲಿ ಅಭಿಜಿತ್, ಗೋಧೂಳಿ ಮುಂತಾದ ವಿಶಿಷ್ಟ ಸಮಯಗಳಿಗೆ ಪ್ರಾಶಸ್ತ್ಯ ಬರುತ್ತದೆ.

## ॥ ಅಭಿಜಿನ್ಮುಹೂರ್ತ ॥

**ವಿಷ್ಟಿ ವ್ಯತೀಪಾತಮುಖಾಶ್ಚ ದೋಷಾಃ**
**ಸರ್ವೇ ಗ್ರಹೋತ್ಪಾತಸಮುದ್ಭವಾಶ್ಚ ।**
**ಮಧ್ಯಂದಿನಂ ಯಾತಿ ಸಹಸ್ರರಶ್ಮೌ**
**ನಶ್ಯಂತಿ ದೋಷಾಸ್ತ್ವಭಿಜಿತ್ಪ್ರಭಾವಾತ್ ॥ 8 ॥**

ವಿಷ್ಟಿ, ವ್ಯತೀಪಾತ ಮೊದಲಾದ ಪಂಚಾಂಗದೋಷಗಳೂ ಪಾಪೋದಯ, ಪಾಪದೃಷ್ಟಿ, ಗ್ರಹಗಳ ಅನಿಷ್ಟಸ್ಥಿತಿ, ಉತ್ಪಾತಾದಿಗಳಿಂದ ಉದ್ಭವಿಸಿದ ದೋಷಗಳೂ

ಮಧ್ಯಾಹ್ನದ ಸಮಯದಲ್ಲಿ ಸಂಪೂರ್ಣ ದಿಗ್ಬಲಯುಕ್ತನಾದ ರವಿಯ ಪ್ರಭಾವದಿಂದಾಗಿ ಪರಿಹಾರವಾಗುತ್ತವೆ. ಆದ್ದರಿಂದ ಇದಕ್ಕೆ ಅಭಿಜಿನ್ಮುಹೂರ್ತವೆಂದು ಹೆಸರು. (ಅಭಿಜಿತ್ = ಎಲ್ಲ ದೋಷಗಳನ್ನೂ ಜಯಿಸುವುದು.)

ಅಭಿಜಿನ್ಮುಹೂರ್ತಯೋಗೇ ಗತವತಿ ಮಧ್ಯಂ ದಿನಾಧಿಪತೌ ।
ಚಕ್ರೇಣ ಚಕ್ರಪಾಣಿಃ ಸಮಸ್ತದೋಷಾನ್ನಿಷೂದಯತಿ ॥ 9 ॥

ದಿನಾಧಿಪತಿಯಾದ ಸೂರ್ಯನು ಅಭಿಜಿನ್ಮುಹೂರ್ತರೂಪ ಮಧ್ಯಾಹ್ನದಲ್ಲಿದ್ದಾಗ ಯಾವ ಕ್ರಿಯಾಕಲಾಪಗಳನ್ನು ನಡೆಸಿದರೂ ಸಾಕ್ಷಾತ್ ಸೂರ್ಯನಾರಾಯಣ ದೇವರೇ ತನ್ನ ಆಯುಧವಾದ ಸುದರ್ಶನ ಚಕ್ರದಿಂದ ಎಲ್ಲ ದುರ್ಮುಹೂರ್ತ ದೋಷಗಳನ್ನೂ ನಿರ್ಮೂಲಮಾಡುತ್ತಾರೆ.

ಪೈಶಾಚೀ ಪಶ್ಚಿಮಾ ಸಂಧ್ಯಾ ಪ್ರಾಕ್‌ಸಂಧ್ಯಾ ರೌದ್ರಿಕೋಚ್ಯತೇ ।
ರಾಕ್ಷಸೀ ಚಾರ್ಧರಾತ್ರಿಃ ಸ್ಯಾತ್ ಬ್ರಾಹ್ಮೀ ಮಧ್ಯಾಹ್ನಮುಚ್ಯತೇ ॥ 10 ॥

ಸಂಧ್ಯಾಕಾಲಗಳು 4 –ಪ್ರಾತಃ, ಮಧ್ಯಾಹ್ನ, ಸಾಯಂ ಮತ್ತು ಅರ್ಧರಾತ್ರಿ ಸಂಧ್ಯೆ. ಪಶ್ಚಿಮಸಂಧ್ಯೆಗೆ ಪೈಶಾಚಿ ಎಂದೂ ಪ್ರಾಕ್‌ಸಂಧ್ಯೆಗೆ ರೌದ್ರಿ ಎಂದೂ ಅರ್ಧರಾತ್ರಿಗೆ ರಾಕ್ಷಸಿ ಎಂದೂ ಮಧ್ಯಾಹ್ನಸಂಧ್ಯೆಗೆ ಬ್ರಾಹ್ಮೀಸಂಧ್ಯೆಯೆಂದೂ ಹೆಸರು. ಬ್ರಾಹ್ಮೀ ಸಂಧ್ಯೆಯು ಎಲ್ಲದಕ್ಕೂ ಪ್ರಶಸ್ತವೆಂದು ಅಭಿಪ್ರಾಯ.

ಅಭಿಜಿನ್ನಾಮ ಮಧ್ಯಾಹ್ನೋ ಮುಹೂರ್ತೋ ವೈಷ್ಣವಃ ಸ್ಮೃತಃ ।
ಚಕ್ರಮಾದಾಯ ಭಗವಾನ್ ವಿಷ್ಣುರ್ದೋಷಾನ್ ವ್ಯಪೋಹತಿ ॥ 11 ॥

ಮಧ್ಯಾಹ್ನದ ಅಭಿಜಿನ್ಮುಹೂರ್ತಕ್ಕೆ ವೈಷ್ಣವಮುಹೂರ್ತವೆಂದು ಹೆಸರು. ಶ್ರೀಮಹಾವಿಷ್ಣುವಿನ ಸುದರ್ಶನಚಕ್ರದ ಪ್ರಭಾವದಿಂದ ಆ ಸಮಯದ ಎಲ್ಲ ದೋಷಗಳೂ ಪರಿಹಾರವಾಗುತ್ತವೆ.

ಸೂರ್ಯಾಚ್ಚತುರ್ಥಂ ಯಲ್ಲಗ್ನಮಭಿಜಿತ್‌ಸಂಜ್ಞಕಂ ಚ ತತ್ ।
ಸರ್ವದೇಶೇಷ್ವಿದಂ ಮುಖ್ಯಂ ಸರ್ವವರ್ಣೇಷು ಸರ್ವದಾ ॥ 12 ॥

ಸೂರ್ಯನಿಂದ 4ನೆ ಲಗ್ನಕ್ಕೆ ಅಭಿಜಿಲ್ಲಗ್ನವೆಂದು ಹೆಸರು. ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಜಾತಿಗಳಲ್ಲಿಯೂ ಇದು ಮುಖ್ಯವಾದದ್ದು.

ಅಶೇಷದೋಷೌಘಹರಂ ಶುಭಪ್ರದಂ
ಜಗುರ್ಮುನೀಂದ್ರಾ ಅಭಿಜಿನ್ಮುಹೂರ್ತಮ್ ।
ತತ್ಥೈವ ಗೋಧೂಲಿಕನಾಮಧೇಯಂ
ವಿವಾಹಯಾತ್ರಾದ್ಯಖಿಲೋತ್ಸವೇಷು ॥ 13 ॥

ಅಭಿಜಿನ್ಮುಹೂರ್ತವನ್ನು ಎಲ್ಲಾ ದೋಷಸಮುದಾಯವನ್ನು ನಿರ್ಮೂಲ ಮಾಡುವ ಶುಭಮುಹೂರ್ತವೆಂದು ಋಷಿಗಳು ಹೇಳುತ್ತಾರೆ. ಅದೇ ರೀತಿ ವಿವಾಹ, ಯಾತ್ರೆ, ಉತ್ಸವಗಳು ಮುಂತಾದ್ದಕ್ಕೆ ಗೋಧೂಲಿ ಸಮಯವು ಪ್ರಶಸ್ತವೆಂದು ಹೇಳುತ್ತಾರೆ.

**ಗೋಪೈರ್ಯಷ್ಟ್ಯಾಹತಾನಾಂ ಖುರಪುಟದಲಿತಾ ಯಾ ತು ಧೂಲಿರ್ದಿನಾಂತೇ**
**ಸೋದ್ವಾಹೇ ಸುಂದರೀಣಾಂ ವಿಪುಲಧನಸುತಾರೋಗ್ಯಸೌಭಾಗ್ಯಕರ್ತ್ರೀ ।**
**ತಸ್ಮಿನ್ ಕಾಲೇ ನ ಚರ್ಕ್ಷಂ ನ ಚ ತಿಥಿಕರಣಂ ನೈವ ಲಗ್ನಂ ನ ಯೋಗಃ**
**ಖ್ಯಾತಃ ಪುಂಸಾಂ ಸುಖಾರ್ಥಂ ಶಮಯತಿ ದುರಿತಾನ್ಯುತ್ಥಿತಂ ಗೋರಜಶ್ಚ ॥**
**॥ 14 ॥**

ಗೊಲ್ಲರ ದಂಡದಿಂದ ಏಟಿಗೊಳಗಾದ ಹಸುಗಳ ಮಂದೆ ಕಾಡಿನಿಂದ ಓಡಿ ಬರುವಾಗ ಎದ್ದ ಪವಿತ್ರವಾದ ಗೋಖುರಗಳ ಧೂಳಿನಿಂದ ಆವೃತವಾದ ಮದುವೆ ಮಂಟಪದಲ್ಲಿ ಮದುವೆಯಾಗುವುದು. ಧನ ಸುಖ ಆರೋಗ್ಯಭಾಗ್ಯ ಪುತ್ರಪೌತ್ರಾದಿಗಳನ್ನು ಉಂಟುಮಾಡುತ್ತದೆ. ಇಂತಹ ಪವಿತ್ರ ಸನ್ನಿವೇಶದಲ್ಲಿ ಮದುವೆಯಾಗುವುದಾದರೆ ನಕ್ಷತ್ರ ತಿಥಿ ಕರಣ ಲಗ್ನ ಯೋಗ ಇತ್ಯಾದಿ ಯಾವುದನ್ನೂ ನೋಡುವ ಆಗತ್ಯವಿಲ್ಲ. ಇದು ಪ್ರಸಿದ್ಧವಾದದ್ದು. ಪುರುಷಾರ್ಥಕರವಾದದ್ದು. ಗೋವುಗಳ ಪಾದದಿಂದ ಏಳುವ ಧೂಳಿಯು ಎಲ್ಲಾ ದೋಷಗಳನ್ನೂ ನಾಶಗೊಳಿಸುತ್ತದೆ.

ಇಷ್ಟೆಲ್ಲಾ ಪ್ರಶಂಸೆ ಇದ್ದರೂ, ಈ ಅಭಿಜಿತ್ ಗೋಧೂಲಿಗಳು ವೈದಿಕೇತರ ಸಂಸ್ಕಾರಗಳಿಗಿರುವುದಾಗಿರುತ್ತವೆ. ಆದ್ದರಿಂದಲೆ 'ನಾಭಿಜಿತ್ಯುಪನಾಯನಂ' ಎಂದು ಉಪನಯನಕ್ಕೆ ಅಭಿಜಿತ್ತನ್ನು ನಿಷೇಧಿಸಿದರು. ಇತರ ಗುಣಗಳಿದ್ದ ಅಭಿಜಿದ್ಗೋಧೂಲಿಗಳು ಆಗಬಹುದೆಂದಿಟ್ಟುಕೊಳ್ಳಬಹುದು.

ಪಂಚಾಂಗಶುದ್ಧಿ, ರಾಶಿಶುದ್ಧಿ, ಗ್ರಹಶುದ್ಧಿ –ಈ ಮೂರು ಇದ್ದ ಮುಹೂರ್ತವು ಅತ್ಯುತ್ತಮ.

## ॥ ಭಾವಬಲವಿಚಾರ ॥

**ವದಂತಿ ಭಾವೈಕ್ಯದಲಂ ಹಿ ಸಂಧಿಂ**
**ತತ್ರ ಸ್ಥಿತಃ ಸ್ಯಾದಫಲೋ ಗ್ರಹೇಂದ್ರಃ ।**
**ಭಾವಪ್ರವೃತ್ತೌ ಹಿ ಫಲಪ್ರವೃತ್ತಿಃ**
**ಪೂರ್ಣಂ ಫಲಂ ಭಾವಸಮಾಂಶಕೇಷು ॥ 15 ॥**

ಸ್ಫುಟ ಮಾಡಿದಾಗ ಬರುವ ಭಾವ ಪ್ರಾರಂಭ ಮತ್ತು ವಿರಾಮಕಾಲಕ್ಕೆ ಸಂಧಿ ಎಂದು ಹೆಸರು. ಈ ಸಂಧಿಯಲ್ಲಿರತಕ್ಕಂತಹ ಗ್ರಹದ ಫಲವು ಶೂನ್ಯವಾಗುತ್ತದೆ. ಭಾವಮಧ್ಯಕ್ಕೆ ಬರುತ್ತಿದ್ದಂತೆ ಗ್ರಹಗಳ ಭಾವಫಲದಾಯಕತ್ವವು ಹೆಚ್ಚಾಗುತ್ತ ಬರುತ್ತದೆ. ಭಾವಸಮಾಂಶಕದಲ್ಲಿರುವ ಗ್ರಹನು ಪೂರ್ಣ ಫಲವನ್ನು ಕೊಡುತ್ತಾನೆ.

ಭಾವಾಂಶತುಲ್ಯಃ ಖಲು ವರ್ತಮಾನೋ
ಭಾವೋದ್ಭವಂ ಪೂರ್ಣಫಲಂ ವಿಧತ್ತೇ ।
ಭಾವೋನಕೇ ಚಾಪ್ಯಧಿಕೇ ಚ ಖೇಟೇ
ತ್ರೈರಾಶಿಕೇನಾತ್ರ ಫಲಂ ಪ್ರಕಲ್ಪ್ಯಮ್ ॥ 16 ॥

ಭಾವಾಂಶದೊಂದಿಗೆ ತುಲ್ಯವಾಗಿ ಇರುವ ಗ್ರಹವು ಭಾವದ ಸಂಪೂರ್ಣ ಫಲವನ್ನು ಕೊಡುತ್ತದೆ. ಭಾವಮಧ್ಯ ಗ್ರಹಗಳ ಅಂತರ ಹೆಚ್ಚಿದಷ್ಟು ಫಲವು ಕಡಮೆ ಯಾಗುತ್ತದೆ. ತ್ರೈರಾಶಿಕದಿಂದ ಇದರ ಫಲವನ್ನು ಕಂಡುಹಿಡಿಯಬೇಕು.

ಯಾತ್ರಾವಿವಾಹಾದಿಷು ಶೋಭನೇಷು
ಕಾರ್ಯೇಷ್ವಥಾನ್ಯೇಷ್ವಪಿ ಜನ್ಮಕಾಲೇ ।
ಭಾವಾನ್ ಪ್ರಕುರ್ಯಾದ್ವಚನಾದಿದೃಷ್ಟಾನ್
ಉಕ್ತಾನ್ಮಯಾ ಶಿಷ್ಯಹಿತಾರ್ಥಮೇವಮ್ ॥ 17 ॥

ಯಾತ್ರ ವಿವಾಹಾದಿ ಶುಭಕಾರ್ಯಗಳಲ್ಲಿಯೂ ಲೌಕಿಕ ಕಾರ್ಯಗಳಲ್ಲಿಯೂ ಜಾತಕದಲ್ಲಿಯೂ ಶಾಸ್ತ್ರೋಕ್ತ ರೀತಿಯಿಂದ ಭಾವಸ್ಫುಟಾದಿಗಳನ್ನು ಮಾಡಿಕೊಳ್ಳ ಬೇಕು.

ಜನ್ಮಪ್ರಯಾಣ ವ್ರತಬಂಧಚೌಲ–
ನೃಪಾಭಿಷೇಕಾದಿ ಕರಗ್ರಹೇಷು ।
ಏವಂ ಹಿ ಭಾವಾಃ ಪರಿಕಲ್ಪನೀಯಾ–
ಸ್ತೈರೇವ ಭಾವೋತ್ಥಫಲಾನಿ ಯಸ್ಮಾತ್ ॥ 18 ॥

ಜಾತಕ, ಪ್ರಯಾಣ, ಉಪನಯನ, ಚೌಲ, ರಾಜಾಭಿಷೇಕ, ವಿವಾಹಾದಿ ಮುಖ್ಯ ಕಾರ್ಯಗಳಲ್ಲೆಲ್ಲಾ ಈ ರೀತಿ ಭಾವಗಳು ಕಲ್ಪಿಸಲ್ಪಡತಕ್ಕದ್ದು. ಹಾಗಾದರೆ ಮಾತ್ರ ಭಾವಫಲಗಳು ಸರಿಯಾಗಿರಲು ಸಾಧ್ಯ.

## ॥ ಪಂಚಾಂಗಬಲಗಳ ವಿಚಾರ ॥

ತಿಥಿತಿಥಿದಲಯೋಗವಾರತಾರಾಃ
ಜಗತಿ ಭವಂತಿ ಯಥೋತ್ತರಂ ಬಲಿಷ್ಠಾಃ ।
ಇತಿ ಗುರುಮತಮೇವ ಸಾಧುಮನ್ಯೇ
ವಿವಿಧಮಿಹಾಸ್ತಿ ಮತಂ ಮಹಾಮುನೀನಾಮ್ ॥ 19 ॥

ತಿಥಿ, ಕರಣ, ಯೋಗ, ವಾರ, ನಕ್ಷತ್ರಗಳು ಉತ್ತರೋತ್ತರ ಬಲಿಷ್ಠಗಳಾಗಿರು ತ್ತವೆ. ಬೃಹಸ್ಪತಿ ಆಚಾರ್ಯರ ಈ ಮತವೇ ಅನುಸರಣೀಯವೆಂದು ತೋರುತ್ತದೆ. ಈ ವಿಷಯದಲ್ಲಿ ಬೇರೆ ಬೇರೆ ಋಷಿಗಳಿಗೆ ಬೇರೆ ಬೇರೆ ಅಭಿಪ್ರಾಯಗಳಿವೆ.

ಪಂಚ ಅಂಗಗಳ ಬಲಾಬಲನಿರೂಪಣೆ ಮಾಡಿ ಸಂಸ್ಕಾರಗಳಿಗೆ ಸಂಬಂಧ ಪಟ್ಟಂತೆ ಸ್ವಕಾಲ ಮುಂತಾದ್ದರ ಬಲಾಬಲನಿರೂಪಣೆ ಮಾಡುತ್ತಾರೆ.

ಸ್ವಕಾಲಃ ಕರಣಂ ವಾರೋ ನಕ್ಷತ್ರಂ ತಿಥಯೋ ಗ್ರಹಾಃ ।
ರಾಶಯೋ ರಾಜಯೋಗಾದ್ಯಾಃ ಕ್ರಮಾದೇತೇಽಪ್ಯ ದುರ್ಬಲಾಃ ॥ 20 ॥

ಸಂಸ್ಕಾರಗಳಲ್ಲಿ ವಿಹಿತಕಾಲವು ಅತ್ಯಂತ ಬಲಿಷ್ಠವಾದ ಅಂಶ. ಉದಾಹರಣೆಗೆ– ಪುಂಸವನಕ್ಕೆ 3ನೆ ತಿಂಗಳು ಸೀಮಂತಕ್ಕೆ ವಿಹಿತ ಮಾಸಗಳು, ವಿಷ್ಣುಬಲಿಗೆ 8ನೆ ತಿಂಗಳು, ನಾಮಕರಣಕ್ಕೆ 11, 12ನೆ ದಿನ, ಉಪನಿಷ್ಕ್ರಮಣಕ್ಕೆ ವಿಹಿತ ಮಾಸ, ಅನ್ನ ಪ್ರಾಶನಕ್ಕೆ 6ನೆ ತಿಂಗಳು, ಚೌಲ ಅಕ್ಷರಾಭ್ಯಾಸಗಳಿಗೆ 3ನೆ ವರ್ಷ, ಉಪನಯನಕ್ಕೆ 8ನೆ ವರ್ಷ –ಇದು ಅತ್ಯಂತ ಪ್ರಬಲ.

ಅನಂತರ ಕರಣ, ವಾರ, ನಕ್ಷತ್ರ, ತಿಥಿ, ಗ್ರಹಗಳು, ರಾಶಿಗಳು, ರಾಜ ಯೋಗಾದಿಗಳು –ಇವು ಕ್ರಮೇಣ ದುರ್ಬಲಗಳು. ಇದು ಮುಹೂರ್ತಚಿಂತನೆಯಲ್ಲಿ ಬಲಾಬಲದ ಕ್ರಮ.

ಜಾತಕದಲ್ಲಿ ಇದನ್ನು ವ್ಯುತ್ಕ್ರಮವಾಗಿ ತಿಳಿಯಬೇಕು. ರಾಜಯೋಗಾದಿಗಳು ಅತ್ಯಂತ ಪ್ರಬಲ; ಅನಂತರ ರಾಶಿ, ಗ್ರಹ, ತಿಥಿ, ನಕ್ಷತ್ರ, ವಾರ, ಕರಣಗಳು.

ಕಾಲಾವಯವಗಳ ಬಲಾಬಲಜ್ಞಾನಕ್ಕೆ ಇದರ ತಿಳಿವಳಿಕೆ ಅತ್ಯಂತ ಆವಶ್ಯಕ.

## ॥ ದೇಶಾಚಾರದ ಪ್ರಾಮಾಣ್ಯ ॥

ನ ಶಾಸ್ತ್ರದೃಷ್ಟ್ಯಾ ವಿದುಷಾ ಕಥಂಚಿ–
ದುಲ್ಲಂಘನೀಯಾಃ ಕುಲದೇಶಧರ್ಮಾಃ ।
ಮೂಲಂ ಹಿ ತೇಷಾಂ ಚ್ಯುತವೇದಶಾಖಾ
ಭೂಯಾನ್ ಹಿ ಧರ್ಮಸ್ಥಿತಿಭಂಗದೋಷಃ ॥ 21 ॥

ಶಾಸ್ತ್ರದೃಷ್ಟಿಯಿಂದ ತಿಳಿದವರು ಎಂದೂ ಕುಲದೇಶಧರ್ಮಗಳನ್ನು ಮೀರ ಬಾರದು. ಯಾವುದೇ ಚಿಕ್ಕ ವಿಷಯಕ್ಕೆ ಸಹ ಮೂಲಪ್ರಮಾಣವಾಗಿ ವೇದವೇ ಇರುತ್ತದೆ. ಇದನ್ನು ನಾವು ತಿಳಿದಿರುವುದಿಲ್ಲ. ದೇಶಾಚಾರವನ್ನು ಉಲ್ಲಂಘಿಸುವಾಗ ಆ ಧರ್ಮಸ್ಥಿತಿಗೆ ಭಂಗ ಉಂಟುಮಾಡಿದ ದೋಷ ಬರುತ್ತದೆ. ಮುಹೂರ್ತ ವಿಷಯದಲ್ಲಿಯಂತೂ ಬೇರೆ ಬೇರೆ ಊರುಗಳಲ್ಲಿ ಅವರವರ ಆಚಾರಕ್ಕನುಸಾರವಾಗಿ ಬೇರೆ ಬೇರೆ ಮುಹೂರ್ತಗ್ರಂಥಗಳಿರುವುದನ್ನು ಗಮನಿಸಬಹುದು.

## ॥ ಸಾಮಾನ್ಯ ಮುಹೂರ್ತಗಳು ॥

ಕೃಷಿಂ ಬೀಜವಾಪಂ ನರೇಂದ್ರಾಭಿಷೇಕಂ
ಸವಿದ್ಯಾಗೃಹಾರಂಭದೇವಪ್ರತಿಷ್ಠಾಃ ।
ಕ್ರಿಯಾಃ ಸಪ್ತ ಚೌಲಾದಿಕಾ ನಾಮಧೇಯ
ಕ್ರಿಯಾಂ ಚ ಕ್ಷಪಾಯಾಂ ನ ಕುರ್ವಂತಿ ಸಂತಃ ॥ 22 ॥

ಕೃಷಿಯನ್ನೂ ಬೀಜಬಿತ್ತುವಿಕೆಯನ್ನೂ ರಾಜಾಭಿಷೇಕವನ್ನೂ ವಿದ್ಯಾರಂಭ–ಗೃಹಾರಂಭಗಳನ್ನೂ ದೇವಪ್ರತಿಷ್ಠೆಯನ್ನೂ ಚೌಲ ಮೊದಲುಗೊಂಡ 7 ಕ್ರಿಯೆಗಳನ್ನೂ ನಾಮಕರಣವನ್ನೂ ರಾತ್ರಿ ಯಾರೂ ಮಾಡುವುದಿಲ್ಲ.

**ಕೃಷ್ಯಾದಿಕಾನ್ಯತ್ರ ಚತುರ್ದಶೈವಂ**
**ಕರ್ಮಾಣ್ಯನುಕ್ತಾನಿ ನಿಶಾಸು ಯಾನಿ ।**
**ತತ್ಕರ್ಣವೇಧೇಷು ಗೃಹಪ್ರವೇಶ–**
**ಯುಕ್ತೇಷು ತೇಷ್ವಷ್ಟಮಶುದ್ಧಿಮಾಹುಃ ॥ 23 ॥**

ಕೃಷಿ ಮೊದಲುಗೊಂಡು 14 ಕ್ರಿಯೆಗಳನ್ನು ರಾತ್ರಿ ಮಾಡಬಾರದೆಂದು ಇಲ್ಲಿ ತಿಳಿಸಲಾಯಿತು. ಕರ್ಣವೇಧ, ಗೃಹಪ್ರವೇಶಗಳಿಗೂ ಇದು ಪ್ರಶಸ್ತವಲ್ಲ. ಇದು ಎಲ್ಲದಕ್ಕೂ ಅಷ್ಟಮಶುದ್ಧಿ ಅಗತ್ಯ.

**ಲಗ್ನಸ್ಯ ದೋಷಾಂಸ್ತ್ಯಜ ಪಾಪದೃಷ್ಟಿಂ**
**ಪಾಪೋದಯಂ ಚೋಭಯಪಾಪತಾಂ ಚ ।**
**ಅಪಾಪಲಾಭಾರಿಸಹೋತ್ಥತಾಂ ಚ**
**ಶುಭಗ್ರಹಾನಾಶ್ರಿತ ಕೇಂದ್ರತಾಂ ಚ ॥ 24 ॥**

ಲಗ್ನಕ್ಕೆ ಪಾಪದೃಷ್ಟಿ, ಪಾಪೋದಯ, ಉಭಯಪಾಪಿತ್ವ –ಇವುಗಳನ್ನು ಬಿಡಬೇಕು. 3, 6, 11ನೆ ಭಾವಗಳಲ್ಲಿ ಪಾಪಗ್ರಹಗಳಿರುವುದು ಉತ್ತಮ. ಶುಭಗ್ರಹಗಳು ಕೇಂದ್ರದಲ್ಲಿ ಇರಬೇಕು. ಈ ಲಕ್ಷಣಗಳು ಯಾವ ಲಗ್ನಕ್ಕೂ ಪೂರ್ಣವಾಗಿ ಸಾಧ್ಯವಿಲ್ಲದಿದ್ದರೂ, ಸಾಧ್ಯವಿದ್ದಷ್ಟು ಹೆಚ್ಚು ಗುಣಗಳಿರುವ ಹಾಗೆ ನೋಡಿಕೊಳ್ಳಬೇಕು.

**ಸಮಸ್ತಕಾರ್ಯೇಷು ವಳಕ್ಷಪಕ್ಷೇ**
**ನಿಶಾಕರಸ್ಯೋದಯವಾರವರ್ಗಾಃ ।**
**ಶುಭಾಃ ಪ್ರದಿಷ್ಟಾ ಬಹುಲೇ ತ್ವನಿಷ್ಟಾಃ**
**ಸದಾಽಪ್ಯನಿಷ್ಟೋಽಭ್ಯುದಯೋ ವಿವಾಹೇ ॥ 25 ॥**

ಎಲ್ಲಾ ಕಾರ್ಯಗಳಲ್ಲಿಯೂ ಶುಕ್ಲಪಕ್ಷದಲ್ಲಿ ಚಂದ್ರನ ಉದಯ, ವಾರ, ವರ್ಗಗಳು ಶುಭಪ್ರದಗಳು. ಕೃಷ್ಣಪಕ್ಷದಲ್ಲಿ ಇವೆಲ್ಲವೂ ಅನಿಷ್ಟವೆಂದು ತಿಳಿಯಬೇಕು. 2 ಪಕ್ಷಗಳಲ್ಲಿಯೂ ವಿವಾಹಕ್ಕೆ ಚಂದ್ರನ ಉದಯವು ಅನಿಷ್ಟ.

## ॥ ಜನ್ಮನಕ್ಷತ್ರದ ಶುಭಾಶುಭತ್ವ ॥

**ಆದ್ಯೇ ಜನ್ಮನಿ ನವ್ಯಭುಕ್ತಿವಸನಾಲಂಕಾರಪುಣ್ಯೈರ್ವಿನಾ**
**ಸರ್ವಂ ಕರ್ಮ ಶುಭಾಶುಭಂ ಪರಿಹರೇತ್ ಭುಕ್ತಿಂ ನವಾಂ ಚಾರ್ಭಕಃ ।**
**ಹಿತ್ವಾಽಭ್ಯಂಗವಿಧಿಂ ನಿಷೇಕಸಹಿತಂ ಕ್ಷೌರಂ ಚ ಶಿಷ್ಟಂ ಶುಭಂ**
**ಕಾರ್ಯಂ ಕಾರ್ಯಮುಶಂತಿ ಕೇಚಿದೃಷಯೋ ಜನ್ಮರ್ಕ್ಷಯೋರನ್ಯಯೋಃ ॥**
**॥ 26 ॥**

ಮೊದಲ ಜನ್ಮನಕ್ಷತ್ರವು ನವಾನ್ನ, ವಸ್ತ್ರಧಾರಣೆ, ಆಭರಣಧಾರಣೆ, ಪುಣ್ಯ ಕಾರ್ಯಗಳನ್ನು ಬಿಟ್ಟು ಉಳಿದ ಎಲ್ಲದಕ್ಕೂ ಮಧ್ಯಮ. ಅನ್ನಪ್ರಾಶನಕ್ಕೆ ಜನ್ಮನಕ್ಷತ್ರ ಕೂಡದು. ಅಭ್ಯಂಗಸ್ನಾನ, ಗರ್ಭಾಧಾನ, ಕ್ಷೌರಗಳನ್ನು ಬಿಟ್ಟು ಉಳಿದ ಕಾರ್ಯಗಳಿಗೆ ಜನ್ಮನಕ್ಷತ್ರ ಶುಭ. ಅನುಜನ್ಮ ತ್ರಿಜನ್ಮಗಳಲ್ಲಿ ಎಲ್ಲವನ್ನೂ ಮಾಡಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಜನ್ಮರ್ಕ್ಷಂ ಶುಭದಂ ನಿಷೇಕಮಖಯೋಃ ಚೌಲಾನ್ನಭುಕ್ತ್ಯೋಃ ಕೃಷೌ
ಮೌಂಜೀಬಂಧನಪಟ್ಟಬಂಧನಮಹೀಪ್ರಾಪ್ತ್ಯಕ್ಷರಾವಾಪ್ತಿಷು ।
ಏಭ್ಯೋಽನ್ಯೇಷ್ವಶುಭಪ್ರದಂ ಚ ಸವನೇ ಸೀಮಂತ ಸಂಗ್ರಾಮಯೋಃ
ಗರ್ಭಾಧಾನಪಿತೃಕ್ರಿಯಾಕ್ಷುರಭಿಷಗ್ಯಾತ್ರಾವಿವಾಹೇಷ್ವಪಿ ॥ 27 ॥

ಗರ್ಭಾಧಾನ, ಚೌಳ, ಅನ್ನಪ್ರಾಶನ, ಕೃಷಿ, ಉಪನಯನ, ರಾಜಾಭಿಷೇಕ, ಭೂಪರಿಗ್ರಹ, ಅಕ್ಷರಾಭ್ಯಾಸ ಇವುಗಳಿಗೆ ಜನ್ಮನಕ್ಷತ್ರ ಶುಭ. ಯಜ್ಞ, ಸೀಮಂತ, ಯುದ್ಧ, ಪೈತೃಕಕರ್ಮ, ಕ್ಷೌರ, ಔಷಧಿಸೇವನೆ, ಯಾತ್ರೆ, ವಿವಾಹಗಳಲ್ಲಿ ಜನ್ಮನಕ್ಷತ್ರ ಕೂಡದು.

ಇಲ್ಲಿ ನಿಷೇಕ ಗರ್ಭಾಧಾನ, ಮಖಸವನಗಳು ಸಾಮಾನ್ಯ ಸಮಾನಾರ್ಥಕ ಗಳೆಂದು ನಮಗೆ ಕಾಣುವುದಾದರೂ, ಕಾಲನಿರ್ಣಯಕಾರನ ಅಭಿಪ್ರಾಯದಲ್ಲಿ ಇದರ ಅರ್ಥಭೇದಗಳು ಅತ್ಯಂತ ಸೂಕ್ಷ್ಮವಾಗಿವೆ.

## ॥ ಗ್ರಹಗಳ ಶುಭಸ್ಥಿತಿ ॥

ಸೌಮ್ಯಾಃ ಕೇಂದ್ರತ್ರಿಕೋಣೇಷು ಪಾಪಾಃ ಕ್ಷತಸಹೋತ್ಥಯೋಃ ।
ಏಕಾದಶೇ ಸ್ಥಿತಾಃ ಸರ್ವೇ ಶುಭಾಃ ಸ್ಯುಃ ಸರ್ವಕರ್ಮಸು ॥ 28 ॥

ಲಾಭ ಕೇಂದ್ರತ್ರಿಕೋಣಗಳಲ್ಲಿ ಶುಭಗ್ರಹಗಳೂ 3, 6, 11ರಲ್ಲಿ ಪಾಪಗ್ರಹ ಗಳೂ ಸರ್ವಕರ್ಮಗಳಿಗೂ ಶುಭಪ್ರದರಾಗಿರುತ್ತಾರೆ.

ಶ್ರೇಷ್ಠಾ ತಾರಾ ಸತ್ತಿಥಿಃ ಸನ್ಮುಹೂರ್ತಂ
ಸತ್ತಿಥ್ಯರ್ಧಂ ಸನ್ನಿಮಿತ್ತಂ ಚ ಜಾತಮ್ ।
ಯೋಗೇಂದ್ರೋಽಯಂ ಪಂಚಕಲ್ಯಾಣ ನಾಮಾ
ಗರ್ಗೇಣೋಕ್ತಃ ಸರ್ವಕಾರ್ಯಾರ್ಥದಾಯೀ ॥ 29 ॥

ಶ್ರೇಷ್ಠವಾದ ನಕ್ಷತ್ರವೂ, ಒಳ್ಳೆಯ ತಿಥಿಯೂ, ಒಳ್ಳೆಯ ಮುಹೂರ್ತವೂ, ಒಳ್ಳೆಯ ಕರಣವೂ, ಒಳ್ಳೆಯ ಶಕುನವೂ ಇದ್ದರೆ ಅದಕ್ಕೆ ಪಂಚಕಲ್ಯಾಣವೆಂದು ಹೆಸರು. ಇದು ಸರ್ವಾಭೀಷ್ಟವನ್ನು ಕೊಡುತ್ತದೆಂದು ಗರ್ಗಮಹರ್ಷಿಗಳು ಹೇಳುತ್ತಾರೆ.

## ॥ ನಕ್ಷತ್ರದ ಪ್ರಾಬಲ್ಯ ॥

ಯಥಾ ನಿಹಂತಿ ಪ್ರಬಲೋ ಗುಣೋಽನ್ಯಃ
ತ್ಯಾಜ್ಯತ್ವದೋಷಂ ತಿಥಿವಾಸರಾದೇಃ ।

ತಥೈವ ಕಶ್ಚಿನ್ನ ಹಿ ತಾರಕಾಯಾಃ
ತತಶ್ಚ ನಕ್ಷತ್ರಬಲಂ ಪ್ರಸಿದ್ಧಮ್ ॥ 30 ॥

ಯಾವುದೇ ಪ್ರಬಲ ಅಪವಾದವು ತಿಥಿವಾರಾದಿಗಳ ದೋಷವನ್ನು ತೆಗೆದು ಹಾಕುತ್ತದೆ. ಆದರೆ ನಕ್ಷತ್ರದೋಷವನ್ನು ಯಾವ ಅಪವಾದವೂ ತೆಗೆದುಹಾಕುವುದಿಲ್ಲ. ಆದ್ದರಿಂದ ನಕ್ಷತ್ರವೇ ಅತಿ ಪ್ರಬಲವಾದ ಅಂಶ.

## ॥ ಮುಹೂರ್ತಪ್ರಶ್ನೆ ಜಾತಕಗಳಲ್ಲಿ ಬಲಾಬಲ ವಿಭಾಗ ॥

ಯನ್ನಕ್ಷತ್ರಬಲಂ ಮಯಾ ನಿಗದಿತಂ ಗ್ರಾಹ್ಯಂ ಮುಹೂರ್ತೇಷು ತತ್
ಜ್ಞೇಯಂ ನಷ್ಟವಿಚಿಂತಿತಾದಿ ಕಥನೇ ರಾಶಿಗ್ರಹಾಣಾಂ ಬಲಮ್ ।
ಪಂಚಾಂಗಾದಪಿ ಜಾತಕೇಷ್ವತಿಬಲೋ ರಾಶಿಸ್ತತೋಽಪಿ ಗ್ರಹೋ
ಯೋಗಾಃ ಸ್ಯುರ್ಗ್ರಹತೋಽಧಿಕಾ ಧುರುಧುರಾರಾಜಾಧಿಯೋಗಾದಯಃ ॥
॥ 31 ॥

ನಕ್ಷತ್ರಾದಿ ಪಂಚ ಅಂಗಗಳು ಪ್ರಧಾನವೆಂದು ಈ ಅಧ್ಯಾಯದಲ್ಲಿ ತಿಳಿಸಿರುವುದು ಮುಹೂರ್ತಾದಿಗಳಿಗೆ ಮಾತ್ರ ಅನ್ವಯವಾಗುವುದು. ನಷ್ಟಪ್ರಶ್ನೆ, ಇತರ ಕಾರ್ಯ ಚಿಂತೆ ಆದಿ ಪ್ರಶ್ನವಿಧಾನದಲ್ಲಿ ಪಂಚಾಂಗಗಳಿಂದಲೂ ರಾಶಿಗ್ರಹಗಳ ಬಲವೇ ಪ್ರಧಾನ. ಜಾತಕದಲ್ಲಿ ರಾಶಿ-ಗ್ರಹಗಳು, ದುರುಧುರಾಯೋಗ, ರಾಜಯೋಗ, ಅಧಿಯೋಗಾದಿಗಳು ಪ್ರಧಾನ. ಇದರಿಂದಾಗಿ ಮುಹೂರ್ತಾದಿಗಳ ಚಿಂತನೆಯಲ್ಲಿ ಗುರುವು ಕೇಂದ್ರದಲ್ಲಿ ಸ್ವಕ್ಷೇತ್ರದಲ್ಲಿದ್ದು ಹಂಸಯೋಗವಿದೆ ಇತ್ಯಾದಿಯಾಗಿ ಹೇಳುವುದು ಅಸಮಂಜಸ. ಮುಹೂರ್ತಾದಿಗಳಿಗೆ ಸಂಬಂಧಿಸಿ ಹೇಳಿದ ಮಟ್ಟಿಗೆ ತಮ್ಮ ಸ್ಥಿತಿ ಯಾವ ದೋಷಕ್ಕೆ ಅಪವಾದವಾಗಿದೆಯೋ ಆ ದೋಷವನ್ನು ಮಾತ್ರ ಗ್ರಹರು ಪರಿಹರಿಸುತ್ತಾರೆ.

ಸರ್ವತ್ರ ಪ್ರಥಮಂ ಲಗ್ನೇ ಪ್ರಷ್ಟುಶ್ಚಂದ್ರಬಲಂ ತತಃ ।
ಕಲ್ಪ್ಯಂ ಯದೀಂದೌ ಬಲಿನಿ ಸಂತ್ಯನ್ಯೇ ಬಲಿನೋ ಗ್ರಹಾಃ ॥ 32 ॥

ಪ್ರತಿ ಮುಹೂರ್ತಲಗ್ನಕ್ಕೂ ಚಂದ್ರಬಲ ಅತಿ ಮುಖ್ಯ. ಶುಕ್ಲಪಕ್ಷ, ಶುಭ ರಾಶ್ಯಂಶ, ಸ್ವಕ್ಷೇತ್ರ, ಉಚ್ಚ ಮಿತ್ರಕ್ಷೇತ್ರ ಸ್ಥಿತಿ, ಸ್ವಕ್ಷೇತ್ರ-ಉಚ್ಚ-ಮಿತ್ರಕ್ಷೇತ್ರಾಂಶಕ ಇದು ಅತ್ಯಂತ ಆವಶ್ಯಕ ಚಂದ್ರನು ಬಲಿಷ್ಠನಾಗಿದ್ದರೆ ಎಲ್ಲಾ ಗ್ರಹಗಳೂ ಬಲಿಷ್ಠರೆಂದು ತಿಳಿಯಬಹುದು.

ಸೃಷ್ಟ್ವಾ ಗ್ರಹೇಂದ್ರಾನ್ನಿದಧೇ ತುಲಾಯಾ-
ಮೇಕತ್ರ ಸರ್ವಾನಪರತ್ರ ಚಂದ್ರಮ್ ।
ಪ್ರಜಾಪತಿಃ ಸ್ವೈರ ಮತೋಽಲಯತ್ತಾನ್
ವಿಶಿಷ್ಟ ಆಸೀದ್ಧಿಮರಶ್ಮಿಭಾಗಃ ॥ 33 ॥

ಬ್ರಹ್ಮದೇವನು ಎಲ್ಲಾ ಗ್ರಹಗಳನ್ನೂ ಸೃಷ್ಟಿಸಿ ತಕ್ಕಡಿಯಲ್ಲಿ ತೂಗಿದನು. ಎಲ್ಲಾ ಗ್ರಹಗಳನ್ನೂ ಒಂದು ಕಡೆ ಇಟ್ಟು ಚಂದ್ರನನ್ನು ಇನ್ನೊಂದು ಕಡೆ ಇಟ್ಟರೂ ಚಂದ್ರನ ಕಡೆಯ ತೂಕವೇ ಹೆಚ್ಚು ಇತ್ತು

**ಮೂಲಂ ಕಾಲತರೋಃ ಸ್ಮೃತೋ ಹಿಮಕರಃ ಶಾಖಾದಯೋऽನ್ಯೇ ಗ್ರಹಾಃ**
**ಮೂಲೇऽತಿಪ್ರಬಲೇ ಸತಿ ಕ್ಷಿತಿರುಹಃ ಪುಷ್ಯಂತಿ ಶಾಖಾದಯಃ ।**
**ಸನ್ಮೂಲಂ ತರುಮಾಶ್ರಿತಃ ಖಲು ಜನಃ ಪುಷ್ಪಂ ಫಲಂ ವಿಂದತೇ**
**ತಸ್ಮಾಚ್ಚಂದ್ರಬಲಕ್ಷಯೇ ಹಿ ವಿಬಲಾಃ ಶುಕ್ರಜ್ಞಜೀವಾದಯಃ ॥ 34 ॥**

ಕಾಲವೃಕ್ಷಕ್ಕೆ ಚಂದ್ರನೇ ಮೂಲ. ಬೇರೆ ಎಲ್ಲಾ ಗ್ರಹಗಳೂ ಶಾಖೆಗಳು ಮೂಲವು ಅತಿ ಪ್ರಬಲವಾಗಿದ್ದರೆ ಮರದ ಶಾಖೆಗಳು ಪುಷ್ಟಿಗೊಳ್ಳುತ್ತವೆ. ಒಳ್ಳೆಯ ಬುಡವುಳ್ಳ ಮರವನ್ನು ಹೊಂದಿದ ಜನರು ಪುಷ್ಪಫಲಾದಿಗಳನ್ನು ಹೊಂದುತ್ತಾರೆ. ಆದ್ದರಿಂದ ಚಂದ್ರನಿಗೆ ಬಲ ಇಲ್ಲದಿದ್ದರೆ ಬುಧಗುರುಶುಕ್ರರು ದುರ್ಬಲರೆಂದೇ ತಿಳಿಯಬೇಕು.

**ನಿಶ್ಶೇಷದೋಷಹರಣೇ ಶುಭವರ್ಧನೇ ಚ**
**ವೀರ್ಯಂ ಗುರೋರಖಿಲಮಸ್ತ್ಯಖಿಲಗ್ರಹೇಭ್ಯಃ ।**
**ತದ್ವೀರ್ಯಪಾದದಲ ಶಕ್ತಿ ಭೃತೌಜ್ಞಶುಕ್ರೌ**
**ಚಾಂದ್ರಂ ಬಲಂ ತು ನಿಖಿಲಗ್ರಹವೀರ್ಯಬೀಜಮ್ ॥ 35 ॥**

ಎಲ್ಲ ದೋಷಗಳನ್ನೂ ಪರಿಹರಿಸಿ ಶುಭಫಲವನ್ನು ಹೆಚ್ಚಿಸಲು ಗುರುವಿಗೆ ಎಲ್ಲ ಗ್ರಹಗಳಿಗಿಂತಲೂ ಹೆಚ್ಚು ಶಕ್ತಿ ಇದೆ ಬುಧನಿಗೆ ಗುರುವಿನ ಕಾಲುಭಾಗ ಶಕ್ತಿಯೂ ಶುಕ್ರನಿಗೆ ಅರ್ಧಭಾಗ ಶಕ್ತಿಯೂ ಇದೆ. ಆದರೆ ಎಲ್ಲಾ ಗ್ರಹಗಳ ವೀರ್ಯಬೀಜವು ಚಂದ್ರನೇ ಆಗಿದ್ದಾನೆ.

**ದೋಷಾಂಬುರಾಶಿತರಣಾಯ ಕೃಪಾರ್ದ್ರಚೇತಾಃ**
**ಪೋತಂ ಸಸರ್ಜ ಗುರುಶುಕ್ರಮಯಂ ವಿಧಾತಾ ।**
**ಪ್ರಾಪ್ನೋತು ದೋಷಜಲರಾಶಿಮನೇನ ತೀರ್ತ್ವಾ**
**ತತ್ತೀರಜಾನಿ ಖಲು ಪುಣ್ಯಫಲಾನಿ ಲೋಕಃ ॥ 36 ॥**

ದೋಷಗಳೆಂಬ ಸಮುದ್ರವನ್ನು ದಾಟಲಿಕ್ಕೋಸ್ಕರ ಗುರುಶುಕ್ರರೆಂಬ ದೋಣಿಯನ್ನು ಬ್ರಹ್ಮನು ಸೃಷ್ಟಿಸಿದನು. ಈ ಗುರುಶುಕ್ರರೆಂಬ ದೋಣಿಯಿಂದ ದೋಷಜಲ ರಾಶಿಯನ್ನು ಜನರು ದಾಟಿ ದಡದಲ್ಲಿರುವ ಪುಣ್ಯಫಲಗಳನ್ನು ಹೊಂದಲಿ ಎಂದು ಬ್ರಹ್ಮನು ಯೋಚಿಸಿದನು.

## ॥ ಗ್ರಹಗಳ ಬಲಾಬಲ ವಿಚಾರ ॥

**ಸ್ವೋಚ್ಚೇ ಪ್ರದೀಪ್ತಃ ಸುಖಿತಸ್ತ್ರಿಕೋಣೇ**
**ಸ್ವಸ್ಥಃ ಸ್ವಗೇಹೇ ಮುದಿತಃ ಸುಹೃದ್ಭೇ ।**

ಶಾಂತಸ್ತು ಸೌಮ್ಯಗ್ರಹವರ್ಗಸಂಸ್ಥಃ
ಶಕ್ತೋ ಮತೋಽಸೌ ಸ್ಫುಟರಶ್ಮಿಜಾಲಃ ॥ 37 ॥

ಉಚ್ಚದಲ್ಲಿರುವ ಗ್ರಹ ಪ್ರದೀಪ್ತಾವಸ್ಥೆಯಲ್ಲಿರುತ್ತಾನೆ. ತ್ರಿಕೋಣದಲ್ಲಿ ಸುಖಿತ, ಸ್ವಕ್ಷೇತ್ರದಲ್ಲಿ ಸ್ವಸ್ಥ, ಮಿತ್ರಕ್ಷೇತ್ರದಲ್ಲಿ ಮುದಿತ, ಶುಭಕ್ಷೇತ್ರದಲ್ಲಿ ಶಾಂತ, ವಕ್ರಬಲ ಇದ್ದರೆ ಶಕ್ತ –ಇವು ಗ್ರಹಗಳ ಅವಸ್ಥಾಸಂಜ್ಞೆಗಳಾಗಿರುತ್ತವೆ.

ಗ್ರಹಾಭಿಭೂತಃ ಸ ನಿಪೀಡಿತಃ ಸ್ಯಾತ್
ಖಲಸ್ತು ಪಾಪಗ್ರಹವರ್ಗಯಾತಃ ।
ಸುದುಃಖಿತಃ ಶತ್ರುಗೃಹೇ ಗ್ರಹೇಂದ್ರಃ
ನೀಚೇಽತಿಭೀತೋ ವಿಕಲೋಽಸ್ತಯಾತಃ ॥ 38 ॥

ಗ್ರಹಯುದ್ಧದಲ್ಲಿ ಪರಾಜಿತನಾಗಿದ್ದರೆ ಪೀಡಿತ, ಪಾಪಗ್ರಹವರ್ಗದಲ್ಲಿದ್ದರೆ ಖಲ. ಶತ್ರುಗೃಹದಲ್ಲಿದ್ದರೆ ಸುದುಃಖಿತ, ನೀಚದಲ್ಲಿಯಾದರೆ ಅತಿಭೀತ. ಮೂಢನಾಗಿದ್ದರೆ ವಿಕಲ –ಇವು ಅವಸ್ಥಾ ಸಂಜ್ಞೆಗಳು.

ದೀಪ್ತಃ ಪೂರ್ಣಂ ವಿಧತ್ತೇ ಫಲಮಥ ಸುಖಿತಃ ಪಾದಹೀನಸ್ತದರ್ಧಂ
ಸ್ವಸ್ಥಃ ಪಾದೈರ್ವಿಹೀನಂ ತ್ರಿಭಿರಥ ಮುದಿತಃ ಶಾಂತಶಕ್ತೌ ಚ ತದ್ವತ್ ।
ಅತ್ಯಲ್ಪಂ ತತ್ರ ಯೋಽನ್ಯೇ ವಿದಧತಿ ವಿಕಲೋ ಭೀತಸಂಜ್ಞಶ್ಚ ನಷ್ಟಂ
ಭೀತಾದ್ಯಾ ದೀಪ್ತನಿಷ್ಠಾಃ ತ್ವಶುಭಮಪಿ ತಥಾ ವ್ಯತ್ಕ್ರಮೇಣ ಗ್ರಹಾಸ್ತೇ ॥ 39 ॥

ದೀಪ್ತನಾಗಿದ್ದರೆ ಪೂರ್ಣಫಲ, ಸುಖಿತನಾಗಿದ್ದರೆ ಮುಕ್ಕಾಲು ಶುಭಫಲ, ಸ್ವಸ್ಥನಾಗಿದ್ದರೆ ಅರ್ಧಫಲ, ಮುದಿತನಾಗಿದ್ದರೆ ಶುಭ ಕಾಲುಫಲ, ಶಾಂತಶಕ್ತರೂ ಕಾಲುಫಲವನ್ನು ಕೊಡುತ್ತಾರೆ. ವಿಕಲನು ಅಲ್ಪಫಲ ಕೊಡುತ್ತಾನೆ. ಭೀತನಿಗೆ ಶುಭಫಲ ಶೂನ್ಯ, ಅಶುಭಫಲ ಪೂರ್ಣವಾಗಿರುತ್ತದೆ ಮುಕ್ಕಾಲುಭಾಗ ಶುಭಫಲ ನೀಡುವವನು ಕಾಲುಭಾಗ ಅಶುಭಫಲವನ್ನೂ ನೀಡುತ್ತಾನೆ ಇದೇ ರೀತಿ ಎಲ್ಲವನ್ನೂ ತಿಳಿಯತಕ್ಕದ್ದು

## ॥ ಶುಭಾಶುಭಗ್ರಹಗಳ ಯೋಗ್ಯತಾ ತಾರತಮ್ಯ ॥

ಕ್ಷೀಣೇಂದುಶ್ಚ ಸುಧಾಂಶುಜಶ್ಚ ಭೃಗುಜಃ ಪೂರ್ಣೇಂದುಜೀವೌ ಕ್ರಮಾತ್
ಏಕದ್ವಿತ್ರಿಚತುಷ್ಪದಾತ್ಮಕ ಶುಭಾಶ್ಚಾಥೇಜ್ಯಶುಕ್ರೌ ತಥಾ ।
ಸೌಮ್ಯಸ್ಥೌ ಯದಿ ನಾಯಕೇನ ಶುಭದೌ ಕ್ಷೀಣೇಂದು ಪಾಪೇಂದುಜೌ
ಸೂರ್ಯೋ ರಾಹುಕುಜೌ ಚ ಕೇತುರವಿಜೌ ಪಾದಾಧಿಕಾತ್ ಪಾಪದಾಃ ॥
॥ 40 ॥

ಕ್ಷೀಣೇಂದು ಕಾಲುಭಾಗ ಶುಭ. ಬುಧ ಅರ್ಧಭಾಗ, ಶುಕ್ರ ಮುಕ್ಕಾಲುಭಾಗ, ಪೂರ್ಣಚಂದ್ರ ಮತ್ತು ಗುರು ಪೂರ್ಣ ಶುಭ. ಗುರುಶುಕ್ರರು ಶುಭಕ್ಷೇತ್ರದಲ್ಲಿದ್ದು ಭಾವಾಧಿಪ ಸಂಪರ್ಕವನ್ನು ಹೊಂದಿದ್ದರೆ ಅತ್ಯಂತ ಶುಭ. ಕ್ಷೀಣಚಂದ್ರ ಮತ್ತು

ಪಾಪಯುಕ್ತ ಬುಧ ಕಾಲುಭಾಗ ಪಾಪಿಗಳು. ಸೂರ್ಯನು ಅರ್ಧಭಾಗ ಪಾಪ, ರಾಹು ಅಂಗಾರಕರು ಮುಕ್ಕಾಲುಭಾಗ, ಕೇತುಶನಿಗಳು ಪೂರ್ಣಪಾಪಗ್ರಹರು

## ॥ ಗುಣದೋಷಗಳ ಬಲಾಬಲ ॥

ದೋಷಾನ್ ವಿನಿಘ್ನಂತಿ ಗುಣಾ ಬಲಾಢ್ಯಾಃ
ಸಮಾನತಾಯಾಂ ಬಲಿನೋ ಹಿ ದೋಷಾಃ ।
ಇತಿ ದ್ವಯಾನಾಂ ಚ ವಿಮೃಶ್ಯ ವೀರ್ಯಂ
ಶುಭಂ ಬಲೀಯಸ್ಸುಗುಣೇಷು ಕುರ್ಯಾತ್ ॥ 41 ॥

ಬಲಿಷ್ಠ ಗುಣಗಳು ದೋಷಗಳನ್ನು ಹೋಗಲಾಡಿಸುತ್ತವೆ. ಗುಣದೋಷಗಳು ಸಮಾನ ಬಲಿಷ್ಠವಾದರೆ ದೋಷವೇ ಹೆಚ್ಚೆಂದು ತಿಳಿಯಬೇಕು. ಈ ರೀತಿ ಗುಣ ದೋಷಗಳ ಬಲಾಬಲಗಳನ್ನು ಚೆನ್ನಾಗಿ ವಿಮರ್ಶಿಸಿ, ಗುಣಗಳು ಬಲಿಷ್ಠವಾಗಿರು ವಾಗ ಶುಭಕಾರ್ಯಗಳನ್ನು ಮಾಡಬೇಕು.

ಶುಭಗ್ರಹಾಣಾಮುದಯೋಽಸ್ತಿ ನಿತ್ಯಂ
ನ ತಾವತಾ ಕರ್ಮ ಶುಭಂ ವಿದಧ್ಯಾತ್ ।
ಗ್ರಾಹ್ಯೋ ಮಹಾದೋಷವಿವರ್ಜಿತೋಽಯಂ
ಇದಂ ಮುಹೂರ್ತಸ್ಯ ಪರಂ ರಹಸ್ಯಮ್ ॥ 42 ॥

ಶುಭಗ್ರಹಗಳ ಉದಯ ಪ್ರತಿದಿವಸವೂ ಇದೆ. ಆದ್ದರಿಂದ ಹಲವು ದಿನಗಳಲ್ಲಿ ಶುಭಮುಹೂರ್ತಗಳಿವೆ ಎಂದು ಹೇಳಬಾರದು. ಮುಹೂರ್ತವು ಮಹಾದೋಷ ವಿಲ್ಲದೆ ಇರಬೇಕು. ಶುಭೋದಯ, ಅಭಿಜಿತ್ ಮುಂತಾದ್ದನ್ನು ಶಾಸ್ತ್ರಗಳು ಬಹು ವಾಗಿ ಪ್ರಶಂಸಿಸಿದರೂ ಮಹಾದೋಷಗಳಿದ್ದರೆ ಅಭಿಜಿನ್ಮುಹೂರ್ತ, ಶುಭೋ ದಯಾದಿಗಳು ಎಂದೂ ಆ ದೋಷಗಳನ್ನು ಹೋಗಲಾಡಿಸುವುದಿಲ್ಲ.

## ॥ ಪ್ರಧಾನ ಕಾರ್ಯಕ್ಕೆ ಮಾತ್ರ ಮುಹೂರ್ತ ॥

ಕಾರ್ಯಂ ಯದೇಕಂ ಕ್ರಿಯತೇ ಪ್ರಧಾನಂ
ತದಾಹುರನ್ಯಾನ್ಯುಪಸರ್ಜನಾನಿ ।
ಗ್ರಾಹ್ಯೋ ವಿರುದ್ಧೋಽಪ್ಯುಪಸರ್ಜನಾನಾಂ
ಬಲೀ ಪ್ರಧಾನಾನುಗುಣೋ ಮುಹೂರ್ತಃ ॥ 43 ॥

ಪ್ರಧಾನ ಕಾರ್ಯಕ್ಕೆ ಮುಹೂರ್ತವನ್ನು ನಿಶ್ಚಯ ಮಾಡಿದರೆ ಅದರ ಅಂಗವಾಗಿರುವ ಉಪಸರ್ಜನಗಳಿಗೆ ಮುಹೂರ್ತದ ಅಗತ್ಯವಿಲ್ಲ ಉಪಸರ್ಜನ ಕಾರ್ಯಗಳಿಗೆ ಮುಹೂರ್ತವು ವಿರುದ್ಧವಾಗಿದ್ದರೂ ಬಾಧಕವಿಲ್ಲ. ಬಲಿಷ್ಠವಾದ ಮುಹೂರ್ತವು ಪ್ರಧಾನ ಕಾರ್ಯಕ್ಕೆ ಅನುಗುಣವಾಗಿರಬೇಕು

## ॥ ಒಟ್ಟು ಗುಣದೋಷಗಳ ಸಂಖ್ಯೆ ॥

**ದೋಷಾಣಾಂ ದಶಧಾ ಜಗಾದ ಧಿಷಣೋ ವೀರ್ಯಾಣಿ ನೈಸರ್ಗಿಕಂ**
**ಪಂಚಾಂಗೇನ ಕೃತಾನಿ ಪಂಚ ಬಲಿಭಿಃ ಕ್ಷೇತ್ರೈರ್ಗ್ರಹೇಂದ್ರೈರಪಿ ।**
**ಸಂಯೋಗೈಶ್ಚ ಮಿಥಃ ಸಮೂಹಗಣನೈರುತ್ಪಾದಿತಾನಿ ಕ್ರಮಾತ್**
**ವೈಗುಣ್ಯಂ ದಧತೇ ಯಥೋತ್ತರಮಮೂನ್ಯೇವಂ ಗುಣಾನಾಮಪಿ ॥ 44 ॥**

ಬೃಹಸ್ಪತಿಯು ದೋಷಗಳು 10 ವಿಧವೆಂದು ಹೇಳುತ್ತಾರೆ. ಸ್ಥಾನಬಲಾದಿ ನೈಸರ್ಗಿಕಬಲ, ತಿಥಿಕರಣಯೋಗವಾರತಾರೆಗಳು, ರಾಶಿಗಳು, ಗ್ರಹಗಳು, ರಾಶಿಗ್ರಹ ಸಂಯೋಗ ಮತ್ತು ಗ್ರಹಗ್ರಹಸಂಯೋಗ –ಹೀಗೆ 10 ವಿಧ. ಈ 10 ಚೆನ್ನಾಗಿಲ್ಲದಿದ್ದರೆ ದೋಷಗಳು. ಚೆನ್ನಾಗಿದ್ದರೆ ಗುಣಗಳು.

**ಯಸ್ಯ ಯಸ್ಯ ಚ ಯೋ ನಾಥಃ ಗುಣಸ್ತಸ್ಯ ಬಲೇನ ತು ।**
**ಜ್ಞಾತವ್ಯಾ ಗುಣಸಂಖ್ಯಾ ತು ಗುಣಸ್ತಸ್ಯ ವಿಚಕ್ಷಣೈಃ ॥ 45 ॥**

ಮುಹೂರ್ತಲಗ್ನಸ್ಥಿತನ, ಅದರ ಅಧಿಪತಿಯ, ಅದರ ಷಡ್ವರ್ಗಗಳ, ಅದನ್ನು ನೋಡುವವರ ಗುಣಗಳನ್ನೂ ದೋಷಗಳನ್ನೂ ಲೆಕ್ಕಮಾಡಿ, ದೋಷಾಧಿಕ್ಯವೊ ಗುಣಾಧಿಕ್ಯವೊ ಎಂದು ನಿರ್ಣಯಿಸಬೇಕು.

## ॥ ಗ್ರಹಗಳ ಗುಣದೋಷಗಳ ತೀರ್ಮಾನ ॥

**ಯೇನ ಗ್ರಹೇಣ ಯೋ ದೋಷಃ ತಸ್ಮಿನ್ ಬಲಿನಿ ಸೋಽಬಲಃ ॥ 46 ॥**

ಯಾವ ಗ್ರಹದಿಂದ ದೋಷವಿದೆಯೋ ಅದು ಬಲಿಷ್ಠನಾಗಿದ್ದರೆ ದೋಷ ಕಡಮೆ ದುರ್ಬಲನಾಗಿದ್ದರೆ ದೋಷ ಜಾಸ್ತಿ. 'ಬಲವಾನಿಷ್ಟಂ ಕುರುತೇ' ಎಂಬುದು ಜ್ಯೋತಿಶ್ಶಾಸ್ತ್ರದ ಒಂದು ನ್ಯಾಯ.

**ನೀಚಸ್ಥಾ ಗ್ರಹವಿಜಿತಾ ಅಭಿಭೂತಾ ವಿರಶ್ಮಯೋ ಹ್ರಸ್ವಾಃ ।**
**ಉರಗಾ ಇವ ಮಂತ್ರಹತಾಃ ಭವಂತ್ಯಕಾರ್ಯಕ್ಷಮಾ ಲಗ್ನೇ ॥ 47 ॥**

ನೀಚದಲ್ಲಿರುವ ಗ್ರಹಗಳೂ, ಯುದ್ಧದಲ್ಲಿ ಪರಾಜಿತರೂ, ಚೇಷ್ಟಾಬಲವಿಲ್ಲದವರೂ ಶುಭಫಲವನ್ನು ಕೊಡಲು ಶಕ್ತರಲ್ಲ.

## ॥ ಪಂಚಾಂಗಶುದ್ಧಿ ॥

**ತಿಥಿವಾರರ್ಕ್ಷಯೋಗಾನಾಂ ಕರಣಸ್ಯ ಚ ಮೇಲನಮ್ ।**
**ಪಂಚಾಂಗಸ್ತ್ವಿತಿ ಪಂಚಾನಾಂ ಶುದ್ಧಿಸ್ತ್ವಾವಶ್ಯಕೀ ಮತಾ ॥ 48 ॥**

ತಿಥಿ ವಾರ ನಕ್ಷತ್ರ ಯೋಗ ಕರಣ –ಇವುಗಳ ಸಂಯೋಗವೇ ಪಂಚಾಂಗ. ಈ 5ರ ಶುದ್ಧಿ ಬಹಳ ಪ್ರಧಾನ

ಪಂಚಾಂಗಶುದ್ಧಿರಹಿತೋ ದೋಷಸ್ತ್ವಾದ್ಯಃ ಪ್ರಕೀರ್ತಿತಃ ।
ಯಸ್ಮಿನ್ ಪಂಚಾಂಗದೋಷೋಽಸ್ತಿ ತಸ್ಮಿನ್ ಲಗ್ನಂ ನಿರರ್ಥಕಮ್ ॥ 49 ॥

ಪಂಚಾಂಗಶುದ್ಧಿ ಇಲ್ಲದಿರುವುದು ಮೊದಲನೆಯ ಮಹಾದೋಷ ವ್ಯತೀಪಾತ ವಿಷ್ಟ್ಯಾದಿ ದೋಷಗಳಿರುವ ಮುಹೂರ್ತವು ಶಾಸ್ತ್ರದ ದೃಷ್ಟಿಯಿಂದ ಸಂಪೂರ್ಣ ನಿರರ್ಥಕ.

ಬವಾದಿ ವಣಿಗಂತಾನಿ ಶುಭಾನಿ ಕರಣಾನಿ ಷಟ್ ।
ಪರೀತಾ ವಿಪರೀತಾ ವಾ ವಿಷ್ಟಿರ್ನೇಷ್ಟಾ ತು ಮಂಗಲೇ ॥ 50 ॥

ಬವಾದಿ ವಣಿಜೆ ವರೆಗಿನ 6 ಕರಣಗಳು ಶುಭಕರಣಗಳು ಕೊನೆಯ ವಿಷ್ಟಿ ಯಾವ ರೀತಿ ಇದ್ದರೂ ಅಶುಭವೇ.

ವಿಷ್ಟ್ಯಾಂ ಚತುಷ್ಪದೇ ನಾಗೇ ಕಿಂಸ್ತುಘ್ನೇ ಶಕುನೇ ತಥಾ ।
ವರ್ಜಯೇಚ್ಛುಭಕಾರ್ಯಾಣಿ ದಾರುಣಾದೀನಿ ಕಾರಯೇತ್ ॥ 51 ॥

ವಿಷ್ಟಿ ಹಾಗೂ 4 ಸ್ಥಿರಕರಣಗಳಲ್ಲಿ ಶುಭಕಾರ್ಯಗಳನ್ನು ಮಾಡಕೂಡದು ಕ್ರೂರಕರ್ಮಗಳನ್ನು ಮಾಡಬಹುದು.

## ॥ ಗುಣದೋಷಗಳ ಬಗ್ಗೆ ವಿಶೇಷ ನ್ಯಾಯ ॥

ಗುಣಾನಾಂ ದೋಷಾಣಾಂ ಪ್ರಬಲವಿಬಲತ್ವಾದಿ ವಿದುಷಾ
ಬಲಾನಾಂ ವಾ ತೇಷಾಂ ಸಮಬಲವತಾಮೇಕಸಮಯೇ ।
ಪರಿಚ್ಛೇತ್ತಾ ಕಾಲೋ ಬಹುತರಗುಣೈರ್ದೋಷಹರಣೈಃ
ಸುಯೋಗೈ ರಾದೇಶ್ಯೋ ಗಣಕವಿದುಷಾ ಕರ್ಮಣಿ ಶುಭಃ ॥ 52 ॥

ಮುಹೂರ್ತಶಾಸ್ತ್ರಪ್ರಕಾರ ನಾನಾ ರೂಪದ ಕಾಲಾವಯವಗಳ ಬಲಾಬಲ ನಿರ್ಣಯವನ್ನು ಮಾಡುವಾಗ ಗುಣದೋಷಗಳು ಸಮಸಮವಾಗಿದೆಯೆಂದು ಕಂಡು ಬಂದರೆ ಕಾಲದ ಸೂಕ್ಷ್ಮಾವಯವಗಳನ್ನು ಮತ್ತಷ್ಟು ಪರಿಶೀಲಿಸಿ, ಸೂಕ್ಷ್ಮತರಗಳಾದ ದೋಷಹರಣಶಕ್ತಿಯುಳ್ಳ ಬಹುತರಗುಣಗಳುಳ್ಳ ಸುಮುಹೂರ್ತವನ್ನು ನಿಷ್ಕರ್ಷಿಸಿ ಒಳ್ಳೆಯ ಮೌಹೂರ್ತಿಕನು ಶುಭಕರ್ಮಕ್ಕೆ ಸಮಯನಿರ್ದೇಶ ಮಾಡಬೇಕು.

ಸಮಮುಕ್ತಾಃ ಪೃಥಗಪಿ ಯೇ ದೋಷಾಶ್ಚ ಗುಣಾಶ್ಚ ಸರ್ವಕಾರ್ಯೇಷು ।
ತೇಷಾಂ ಸಾಮಾನ್ಯವಿಧೇಃ ಜ್ಞೇಯೋ ಬಲವಾನ್ ವಿಶೇಷವಿಧಿಃ ॥ 53 ॥

ಗ್ರಂಥಗಳಲ್ಲಿ ನೂರಾರು ಗುಣಗಳನ್ನೂ ದೋಷಗಳನ್ನೂ ವಿವರಿಸಿರುತ್ತಾರೆ. ಆದರಲ್ಲಿ ಸಾಮಾನ್ಯವಿಧಿ ಯಾವುದು? ವಿಶೇಷವಿಧಿ ಯಾವುದು? ಎಂದು ಮೌಹೂರ್ತಿಕನು ತಿಳಿದಿರಬೇಕು. 'ಕೇಂದ್ರೇ ಶುಭಾಃ' –ಕೇಂದ್ರದಲ್ಲಿ ಶುಭರಿದ್ದರೆ ಒಳ್ಳೆಯದು. ಇದು ಸಾಮಾನ್ಯವಿಧಿ. 'ಯದ್ದ್ಯೂನಯೋಃ ಬುಧಸಿತೌ ಮೃತ್ಯುದೌ' ಇದು ವಿಶೇಷ ವಿಧಿ. ಶುಭಗ್ರಹಗಳಾದ ಬುಧಶುಕ್ರರು ಕೇಂದ್ರವಾದ ಸಪ್ತಮದಲ್ಲಿ ಮರಣವನ್ನುಂಟುಮಾಡುತ್ತಾರೆ ಇದಕ್ಕೆ ಸ್ಥಾನವಿಶೇಷವಿಧಿ ಎಂದು ಹೆಸರು. ಇದು ಸಾಮಾನ್ಯ ವಿಧಿಗಳನ್ನೆಲ್ಲಾ ತೊಡೆದುಹಾಕುವ ಶಕ್ತಿ ಹೊಂದಿದೆ.

ತಯೋರನ್ಯಂ ಬಲೀ ಹಂತಿ ತುಲ್ಯೌ ಚೇನ್ನಿಷ್ಫಲಾವುಭೌ ।
ಬಲವಾನಪಿ ದೋಷೌಘಃ ಸ್ವಾಪವಾದೈರ್ವಿನಶ್ಯತಿ ॥ 54 ॥

ಗುಣದೋಷಗಳು ಸಂಪೂರ್ಣ ಸಮವಾಗಿದ್ದರೆ ಎರಡೂ ನಿಷ್ಫಲ ಯಾವುದು ಬಲಿಷ್ಠವೋ ಅದು ದುರ್ಬಲದೋಷವನ್ನಾಗಲಿ ಗುಣವನ್ನಾಗಲಿ ತೊಡೆದು ಹಾಕುತ್ತದೆ ಎಷ್ಟೇ ಬಲಿಷ್ಠವಾದ ದೋಷವಿದ್ದರೂ ಅದಕ್ಕೆ ಪ್ರತ್ಯೇಕವಾಗಿ ಶಾಸ್ತ್ರದಲ್ಲಿ ಅಪವಾದವಿದ್ದರೆ ದೋಷವು ಸಂಪೂರ್ಣ ಹೋಗುತ್ತದೆ

## ॥ ಪಂಚಾಂಗದೋಷಗಳಿಗೆ ಪರಿಹಾರ ॥

ಚಂದ್ರೇ ಚ ಶಂಖಂ ಲವಣಂ ಚ ತಾರೇ
ತಿಥೌ ವಿರುದ್ಧೇ ತ್ವಥ ತಂಡುಲಾಂಶ್ಚ ।
ಧಾನ್ಯಂ ಚ ದದ್ಯಾತ್ಕರಣೇ ಚ ವಾರೇ
ಯೋಗೇ ವಿರುದ್ಧೇ ಕನಕಂ ಚ ದೇಯಮ್ ॥ 55 ॥

ಚಂದ್ರದೋಷವಿದ್ದರೆ ಶಂಖದಾನ. ನಕ್ಷತ್ರದೋಷವಿದ್ದರೆ ಲವಣ ತಿಥಿವಿರುದ್ಧ ವಾದರೆ ತಂಡುಲ ಕರಣ ವಾರಗಳು ವಿರುದ್ಧವಾದರೆ ಧಾನ್ಯದಾನ. ಯೋಗವಿರುದ್ಧ ವಾದರೆ ಸ್ವರ್ಣದಾನ ದೋಷಪರಿಹಾರಕ್ಕೆ ಯಾವ ದಾನ ಹೇಳಿದ್ದರೂ ದೋಷ ಕಾರಕ ಕಾಲಾವಯವ ದೇವತೆಯ ಅನುಗ್ರಹಾರ್ಥ ಹೋಮಪೂಜಾ ಜಪಾದಿಗಳು ಬೇಕು. ದೇವತೆಗಳ ವಿಚಾರ ಸಂಜ್ಞಾಧ್ಯಾಯದಲ್ಲಿ ಬಂದಿದೆ.

## ॥ ದಾನಾದಿಗಳ ಇನ್ನೊಂದು ರೀತಿ ॥

ದುಷ್ಟೇ ಯೋಗೇ ಹೇಮಚಂದ್ರೇ ಚ ಶಂಖಂ
ಧಾನ್ಯಂ ತಿಥ್ಯರ್ಧೇ ತಿಥೌ ತಂಡುಲಾಂಶ್ಚ ।
ವಾರೇ ರತ್ನಂ ಭೇ ಚ ಗಾಂ ಹೇಮ ನಾಡ್ಯಾಂ
ದದ್ಯಾತ್ ಸಿಂಧೂತ್ಥಂ ಚ ತಾರಾಸು ರಾಜಾ ॥ 56 ॥

ದುಷ್ಟಯೋಗಕ್ಕೆ ಚಿನ್ನ, ಚಂದ್ರನ ಸುಸ್ಥಿತಿ ಕಡಮೆಯಿದ್ದರೆ ಶಂಖ, ಕರಣಕ್ಕೆ ಧಾನ್ಯ, ತಿಥಿಗೆ ತಂಡುಲ, ವಾರಕ್ಕೆ ರತ್ನ, ರಾಶಿಗೆ ಗೋವು, ಮುಹೂರ್ತದೋಷಕ್ಕೆ ಸ್ವರ್ಣ, ನಕ್ಷತ್ರದೋಷಕ್ಕೆ ಲವಣದಾನಗಳನ್ನು ಕೊಡಬೇಕು.

ಪಂಚಾಂಗೋತ್ಥಂ ಮುಹೂರ್ತೇಷು ಪ್ರಶ್ನೇ ರಾಶಿಗ್ರಹಾದಯಃ ।
ಜಾತಕೇ ಗ್ರಹಯೋಗಾದಿಫಲಂ ಚಿಂತ್ಯಂ ವಿಶೇಷತಃ ॥ 57 ॥

ಮುಹೂರ್ತದಲ್ಲಿ ಪಂಚಾಂಗದ ಗುಣದೋಷಗಳನ್ನೆ ಹೆಚ್ಚಾಗಿ ಗಮನಿಸಬೇಕು. ಪ್ರಶ್ನೆಯಲ್ಲಿ ರಾಶಿಗ್ರಹಾದಿಗಳಿಗೆ ಪ್ರಾಬಲ್ಯ. ಜಾತಕದಲ್ಲಿ ಗ್ರಹಯೋಗಾದಿಗಳು ಹೆಚ್ಚು ಚಿಂತ್ಯ.

## ॥ ಅನಿವಾರ್ಯವಾದರೆ ವಿಷ್ಟಿಗೆ ಅಪವಾದ ॥

ಮುಖೇ ಪಂಚ ಗಲೇ ತ್ವೇಕಾ ವಕ್ಷಸ್ಯೇಕಾದಶ ಸ್ಮೃತಾಃ ।
ನಾಭೌ ಚತಸ್ರಃ ಷಟ್ ಕಟ್ಯಾಂ ತಿಸ್ರಃ ಪುಚ್ಛೇ ತು ನಾಡಿಕಾಃ ॥ 58 ॥

ವಿಷ್ಟಿಯ 30 ಗಳಿಗೆಯಲ್ಲಿ 5 ಘಟಿ ಮುಖಭಾಗ, 1 ಘಟಿ ಕಂಠ, 11 ಘಟಿ ಎದೆ, 4 ಘಟಿ ನಾಭಿ, 6 ಘಟಿ ಸೊಂಟ, 3 ಘಟಿ ಬಾಲ –ಎಂದು ವಿಭಾಗ.

ಕಾರ್ಯಹಾನಿರ್ಮುಖೇ ಮೃತ್ಯುರ್ಗಲೇ ವಕ್ಷಸಿ ನಿಃಸ್ವತಾ ।
ಕಟ್ಯಾಮುನ್ಮತ್ತತಾ ನಾಭೌ ಚ್ಯುತಿಃ ಪುಚ್ಛೇ ಧ್ರುವೋ ಜಯಃ ॥ 59 ॥

ಮುಖದಲ್ಲಿ ಕಾರ್ಯಹಾನಿ, ಕುತ್ತಿಗೆಯಲ್ಲಿ ಮೃತ್ಯು, ಎದೆಯಲ್ಲಿ ದಾರಿದ್ರ್ಯ, ಸೊಂಟದಲ್ಲಿ ಉನ್ಮಾದ, ನಾಭಿಯಲ್ಲಿ ಭ್ರಂಶ, ಪುಚ್ಛದಲ್ಲಿಯಾದರೆ ಜಯಲಾಭ ಫಲಗಳು. ವಿಷ್ಟಿಯ ಕೊನೆಯ 3 ಗಳಿಗೆಯಲ್ಲಿ ದೋಷ ಕಡಮೆಯೆಂದು ತಾತ್ಪರ್ಯ.

ಅಬಾಧ್ಯಮಾನೋ ವಿಹಿತಕ್ರಿಯಾಸು
ಪಂಚಾಂಗಯೋಗೋ ಗುಣನಾಯಕಾಖ್ಯಃ ।
ಷಡಂಗಯೋಗೋ ಗುಣರಾಜ ಉಕ್ತಃ
ಸಪ್ತಾಂಗಯೋಗೋ ಗುಣರಾಜರಾಜಃ ॥ 60 ॥

ಅವಿಹಿತವಾದ ಯಾವ ದೋಷವೂ ಇಲ್ಲದೆ ಪಂಚಾಂಗಶುದ್ಧಿ ಇದ್ದರೆ ಅದು ಗುಣನಾಯಕಮುಹೂರ್ತ, ಷಡಂಗದಲ್ಲಿಯೂ ಗುಣವಿದ್ದರೆ ಅದು ಗುಣರಾಜ ಮುಹೂರ್ತ, ಸಪ್ತಾಂಗದಲ್ಲಿಯೂ ಏನೂ ದೋಷವಿಲ್ಲದಿದ್ದರೆ ಅದು ಗುಣರಾಜ ರಾಜಮುಹೂರ್ತ.

ತ್ರಿಧಾ ವಿಭಜ್ಯ ದಿವಸಂ ತತ್ರಾದೌ ಕರ್ಮ ದೈವಿಕಮ್ ।
ದ್ವಿತೀಯೇ ಮಾನುಷಂ ಕಾರ್ಯಂ ತೃತೀಯಾಂಶೇ ತು ಪೈತೃಕಮ್ ॥ 61 ॥

ಹಗಲಿನ 30 ಗಳಿಗೆಯನ್ನು 3 ಪಾಲುಮಾಡಿ, ಸುರುವಿನ ಭಾಗ (ಉದಯದಿಂದ 10 ಗಳಿಗೆ) ದೈವಿಕಕಾರ್ಯಕ್ಕೆ ಅನಂತರ 10 ಗಳಿಗೆ ಮಾನುಷಕಾರ್ಯಕ್ಕೆ ಅನಂತರದ 10 ಗಳಿಗೆ ಪೈತೃಕಕಾರ್ಯಕ್ಕೆ ಪ್ರಶಸ್ತ. ಸಾಮಾನ್ಯವಾಗಿ ಧಾರ್ಮಿಕ, ದೈವಿಕಸಂಸ್ಕಾರಕರ್ಮಗಳನ್ನು 10 ಗಳಿಗೆಯೊಳಗೆ ಮಾಡುವುದು ಉತ್ತಮ. ವೇದದಲ್ಲಿ 'ಪೂರ್ವಾಹ್ಣೇ ದೇವಾ ಅಶನಮಭಿಪ್ಸರಂತಿ ಮಧ್ಯಾಹ್ನೇ ಮನುಷ್ಯಾಃ ಅಪರಾಹ್ಣೇ ಪಿತರಃ' ಎಂದು ವಚನವಿದೆ. ಈ ವಿಧಿಯನ್ನು ನೋಡುವಾಗ ಅಭಿಜಿನ್ಮುಹೂರ್ತದ ಪ್ರಾಶಸ್ತ್ಯ ಕಡಮೆಯಾಗುತ್ತದೆ.

॥ ಇತಿ ಮುಹೂರ್ತಸನ್ಮಾರ್ಗದರ್ಶಿನ್ಯಾಂ ಸಾಮಾನ್ಯಮುಹೂರ್ತಚಿಂತನಯುಕ್ತ ಬಲಾಬಲನಿರೂಪಣಾಧ್ಯಾಯಃ ತೃತೀಯಃ ॥

* * *

# ॥ ಅಪವಾದಾಧ್ಯಾಯಃ ॥ 4 ॥

ಅಲ್ಲಲ್ಲಿ ಕೆಲವು ದೋಷಗಳನ್ನು ವಿವರಿಸುವಾಗಲೆ ಕೆಲವು ಅಪವಾದಗಳನ್ನು ಸೂಚಿಸಲಾಗಿದೆ. ಕೆಲವು ಪ್ರಾಯಶ್ಚಿತ್ತಗಳನ್ನೂ ನಿರೂಪಿಸಲಾಗಿದೆ ಬಲಿಷ್ಠವಾದ ದೋಷಗಳನ್ನು ಹೋಗಲಾಡಿಸುವ ಕೆಲವು ಮುಖ್ಯ ಸೂತ್ರಗಳನ್ನು ಈ ಪುಟ್ಟ ಅಧ್ಯಾಯದಲ್ಲಿ ನಿರೂಪಿಸಲಾಗುತ್ತದೆ.

## ॥ ಅಪವಾದಗಳ ಅಗತ್ಯ ॥

ದೋಷೈರಮೀಭಿರಖಿಲೈ ರಹಿತಂ ಮುಹೂರ್ತಂ
ಲೋಕಃ ಕಲೌ ನ ಲಭತೇ ಖಲು ಮಂದಭಾಗ್ಯಃ ।
ತೇ ಯಾಂತಿ ನಾಶಮಪವಾದಗುಣೈರ್ಯತೋಽಸ್ಮಾತ್
ತೇಷಾಂ ಕ್ರಮಾದಭಿದಧೇಽಹಮಿಹಾಪವಾದಾನ್ ॥ 1 ॥

ಮಂದಭಾಗ್ಯರಾದ ಲೋಕದ ಜನರು ಕಲಿಯುಗದಲ್ಲಿ ದೋಷರಹಿತವಾದ ಮುಹೂರ್ತವನ್ನು ಹೊಂದಲು ಶಕ್ತರಾಗುವುದಿಲ್ಲ. ಆ ದೋಷಗಳು ಅಪವಾದ ಗುಣಗಳಿಂದ ನಾಶವಾಗುತ್ತವೆ. ಆದ್ದರಿಂದ ಕೆಲವು ದೋಷಗಳ ಅಪವಾದಗಳನ್ನು ಈ ಅಧ್ಯಾಯದಲ್ಲಿ ನಿರೂಪಿಸುತ್ತೇವೆ.

## ॥ ಗುರುಶುಕ್ರಬುಧರ ಕೇಂದ್ರಸ್ಥಿತಿಯ ಮಹತ್ವ ॥

ಗುರುಃ ಸುದೀಪ್ತಸ್ತನು ಕೇಂದ್ರಸಂಸ್ಥಿತೋ
ಬಲಾಧಿಕೋ ಲಗ್ನಗತೋ ವಿಶೇಷತಃ ।
ಭಿನತ್ತಿ ದೋಷಾನಖಿಲಾಂಸ್ತಥಾವಿಧಃ
ಸ್ವವರ್ಗಸಂಸ್ಥೋ ಭೃಗುಜೋ ಬುಧೋಽಪಿ ವಾ ॥ 2 ॥

ಪರಮೋಚ್ಚದಲ್ಲಿರುವ ಗುರುವು ಚೇಷ್ಟಾದಿ ಬಲಯುಕ್ತನಾಗಿ ಕೇಂದ್ರದಲ್ಲಿ, ವಿಶೇಷವಾಗಿ ಲಗ್ನದಲ್ಲಿ ಇದ್ದರೆ ಸಮಸ್ತದೋಷಗಳನ್ನು ಅಪಹರಿಸುತ್ತಾನೆ ಸ್ವವರ್ಗ ದಲ್ಲಿರುವ ಶುಕ್ರ ಅಥವಾ ಬುಧನು ಸರ್ವದೋಷಾಪಹಾರಕರಾಗಿರುತ್ತಾರೆ.

ಲಕ್ಷಂ ದೋಷಾನ್ ಹಂತಿ ದೇವೇಂದ್ರಪೂಜ್ಯಃ
ಕೇಂದ್ರಪ್ರಾಪ್ತೋ ದೈತ್ಯಮಂತ್ರೀ ತದರ್ಧಮ್ ।
ವೀರ್ಯೋಪೇತಃ ಸೋಮಪುತ್ರಸ್ತದರ್ಧಂ
ಚಾಂದ್ರಂ ವೀರ್ಯಂ ವೀರ್ಯಬೀಜಂ ಗ್ರಹಾಣಾಮ್ ॥ 3 ॥

ಗುರುವು ಕೇಂದ್ರದಲ್ಲಿದ್ದರೆ ಲಕ್ಷದೋಷಗಳನ್ನೂ ಪರಿಹರಿಸುತ್ತಾನೆ ಶುಕ್ರನು ಅದರ ಅರ್ಧದೋಷಗಳನ್ನು ಪರಿಹರಿಸುತ್ತಾನೆ ಬುಧನು ಕಾಲುಭಾಗದೋಷವನ್ನು

ಪರಿಹರಿಸುತ್ತಾನೆ. ಈ ರೀತಿ ದೋಷಪರಿಹಾರವಾಗಬೇಕಾದರೆ ಕೇಂದ್ರದಲ್ಲಿರುವವರು ಬಲಿಷ್ಠರಾಗಿರಬೇಕು

ಚಂದ್ರನಿಗೆ ಒಳ್ಳೆಯ ಬಲವಿರಬೇಕು. ಚಂದ್ರನಿಗೆ ಬಲವಿಲ್ಲದಿದ್ದರೆ ಯಾವ ಗ್ರಹದಿಂದಲೂ ಶುಭಫಲ ಸಿಕ್ಕುವುದಿಲ್ಲ

## ॥ ಛಿದ್ರಾತಿಥಿದೋಷಕ್ಕೆ ಅಪವಾದ ॥

**ಶುಭಕರ್ಮಣಿ ಬಲಿನೀಂದೌ ಛಿದ್ರಾಸ್ತಿಥಯಃ ಕ್ರಮಾಚ್ಚತುರ್ಥ್ಯಾದ್ಯಾಃ ।**
**ನವ ನವ ಮನುತತ್ತ್ವದಿಶಾಶರಘಟಿಕಾಭ್ಯಃ ಪರಂ ಶುಭಾ ಜ್ಞೇಯಾಃ ॥ 4 ॥**

ಶುಭಕರ್ಮಸ್ಥನಾಗಿ ಚಂದ್ರನು ಬಲಿಷ್ಠನಾಗಿದ್ದರೆ ಚತುರ್ಥ್ಯಾದಿ ಛಿದ್ರಾತಿಥಿಗಳ ದೋಷವು ಕಡಿಮೆಯಾಗುತ್ತದೆ. ಹೀಗಿದ್ದರೆ ಚತುರ್ಥ್ಯಾದಿಗಳಲ್ಲಿ ಕ್ರಮವಾಗಿ ಮೊದಲಿನ 9, 9, 14, 25, 10, 5 ಗಳಿಗೆಗಳನ್ನು ಬಿಟ್ಟು ಉಳಿದ ಸಮಯ ಶುಭವಾಗಿರುತ್ತದೆ.

## ॥ ದಗ್ಧಯೋಗಾದಿಗಳ ಫಲ ಕೊಡುವ ಕಾಲ ॥

**ತಿಥಿವಾರರ್ಕ್ಷಯೋಗಾನಾಂ ಫಲಮರ್ಕೋದಯಾದಿತಃ ।**
**ಅರ್ಧಯಾಮಾತ್ಪರಂ ನಾಸ್ತಿ ಶುಭಂ ವಾಪ್ಯಶುಭಂ ಚ ಯತ್ ॥ 5 ॥**

ತಿಥಿವಾರನಕ್ಷತ್ರಯೋಗಗಳ (ಸಿದ್ಧಾದಿ, ದಗ್ಧಾದಿ) ಫಲವು ಶುಭವಾಗಿದ್ದರೂ ಅಶುಭವಾಗಿದ್ದರೂ ಸೂರ್ಯೋದಯದಿಂದ ಒಂದೂವರೆ ಗಂಟೆಯ ವರೆಗೆ ಮಾತ್ರ ಫಲವಿರುತ್ತದೆ. ಅನಂತರ ಇರುವುದಿಲ್ಲ.

## ॥ ಗಂಡಾಂತವಿಷಯ ॥

**ರಾಶಿತಿಥಿತಾರಕಾಣಾಂ ಗಂಡಾಂತಂ ಜಲಧಿವಿಷಯನವಮಾಂತೇ ।**
**ತತ್ರೋಭಯತೋ ನಾಡ್ಯಃ ಶಶಿಗುಣ ಶರಸಮ್ಮಿತಾಸ್ತ್ಯಾಜ್ಯಾಃ ॥ 6 ॥**

ರಾಶಿ ಗಂಡಾಂತ– ಕರ್ಕಾಟಕದ ಕೊನೆ, ಸಿಂಹದ ಪ್ರಾರಂಭ, ವೃಶ್ಚಿಕದ ಕೊನೆ, ಧನು ಪ್ರಾರಂಭ, ಮೀನದ ಕೊನೆ, ಮೇಷ ಪ್ರಾರಂಭ –ಇವುಗಳಲ್ಲಿ 2 ಕಡೆಗಳಲ್ಲಿಯೂ ಒಂದೊಂದು ಗಳಿಗೆ ಬಿಡಬೇಕು. ತಿಥಿಗಂಡಾಂತ– ಪಂಚಮಿಯ ಅಂತ್ಯ, ಷಷ್ಠಿಯ ಪ್ರಾರಂಭ, ದಶಮಿಯ ಅಂತ್ಯ, ಏಕಾದಶೀ ಪ್ರಾರಂಭ, ಹುಣ್ಣಿಮೆ ಅಥವಾ ಅಮಾವಾಸ್ಯೆಯ ಕೊನೆ, ಪಾಡ್ಯದ ಪ್ರಾರಂಭ –ಇವುಗಳಲ್ಲಿ 3–3 ಗಳಿಗೆ ಬಿಡಬೇಕು.

ನಕ್ಷತ್ರಗಂಡಾಂತ– ಆಶ್ಲೇಷಾ ಅಂತ್ಯ, ಮಘೆಯ ಪ್ರಾರಂಭ, ಜ್ಯೇಷ್ಠಾ ಅಂತ್ಯ, ಮೂಲಾ ಪ್ರಾರಂಭ, ರೇವತಿಯ ಅಂತ್ಯ ಅಶ್ವಿನಿಯ ಪ್ರಾರಂಭ –ಇವುಗಳಲ್ಲಿ 5–5 ಗಳಿಗೆ ಬಿಡಬೇಕು

## ॥ ಪಾಪವಾರಗಳಿಗೆ ಅಪವಾದ ॥

ಪಾಪಸ್ಯ ವಾರೇऽಪಿ ಜನಸ್ಯ ಕಾರ್ಯ-
ಮವಶ್ಯಕಾರ್ಯಂ ಯದಿ ತತ್ರ ತಸ್ಮಾತ್ ।
ಶುಭಾಂಶಯುಕ್ತಾಶುಭಕಾಲಹೋರಾ
ಗ್ರಾಹ್ಯೈವ ನೀಚಾನ್ಮಹಿತೇವ ವಿದ್ಯಾ ॥ 7 ॥

ಪಾಪವಾರದಲ್ಲಿಯೂ ಶುಭಕಾರ್ಯಗಳನ್ನು ಮಾಡಲೇಬೇಕಾದ ಅಗತ್ಯ ಬಂದಾಗ, ನೀಚನಿಂದಲೂ ವಿದ್ಯೆ ಗ್ರಹಿಸಬಹುದೆಂಬ ನೀತಿಯಂತೆ ಶುಭಕಾಲ ಹೋರೆಯಲ್ಲಿ ಶುಭಾಂಶಕವಿರುವ ಮುಹೂರ್ತವನ್ನು ನಿಶ್ಚಯಿಸಬಹುದು.

## ॥ ರಾತ್ರಿ ಶುಭಕಾರ್ಯಗಳ ವಿಚಾರ ॥

ಆತ್ಮೋಪಲಬ್ಧಾವಿವ ಯಾಮವತ್ಯಾಂ
ಉಪಾಗತಾಯಾಂ ಗ್ರಹವಾಸರೇಷು ।
ಸರ್ವೇಷು ಭೂತೇಷ್ವಿವ ಬುದ್ಧಿಮಂತೋ
ಹೀನೋತ್ತಮತ್ವಂ ನ ಖಲು ಸ್ಮರಂತೀ ॥ 8 ॥

ರಾತ್ರಿ ಹೊತ್ತು ಅವಶ್ಯ ಕಾರ್ಯವನ್ನು ಮಾಡಲೇಬೇಕಾಗಿ ಬಂದರೆ ಗ್ರಹವಾರಾದಿ ದೋಷಗಳು ಬರುವುದಿಲ್ಲ 'ರಾತ್ರೌ ವಾರಫಲಂ ನಾಸ್ತಿ' ಜ್ಞಾನಿಗಳು ಎಲ್ಲವನ್ನೂ ಸಮವಾಗಿ ನೋಡುವುದರಿಂದ ಯಾವದರಿಂದಲೂ ತೊಂದರೆಗೆ ಒಳಗಾಗದಿರುವಂತೆ ಗ್ರಹವಾಸರಾದಿ ದುಷ್ಫಲಗಳುಂಟಾಗುವುದಿಲ್ಲ.

## ॥ ಪಾಪರಾಶಿಗಳಿಗೆ ಅಪವಾದ ॥

ಪಾಪಾಸ್ಪದಾನಿ ಶುಭವೀಕ್ಷಣಸಂಪ್ರಯೋಗಾತ್
ಕ್ರೌರ್ಯಂ ವಿಹಾಯ ಹಿ ಭಜಂತಿ ಶುಭಸ್ವಭಾವಮ್ ।
ಜ್ಞೇಯಾನಿ ಮಧ್ಯಮಫಲಾನಿ ತತಃ ಶುಭೇಷು
ಗ್ರಾಹ್ಯಾಣ್ಯತೇ ಧರಣಿನಂದನಮಂದಿರಾಭ್ಯಾಮ್ ॥ 9 ॥

ಪಾಪರಾಶಿಗಳೂ ಶುಭದೃಷ್ಟಿ ಇದ್ದರೆ ಕ್ರೂರತೆಯನ್ನು ಬಿಟ್ಟು ಶುಭಸ್ವಭಾವ ವನ್ನು ಹೊಂದುತ್ತವೆ. ಆದ್ದರಿಂದ ಅವು ಮಧ್ಯಮವಾಗಿ ಆಗಬಹುದು. ಆದರೆ ಮೇಷ ವೃಶ್ಚಿಕರಾಶಿಗಳು ಮಾತ್ರ ಕೂಡದು.

## ॥ ರಾಶಿಗ್ರಹಗಳ ಫಲವ್ಯತ್ಯಯ ॥

ಸೌಮ್ಯೋಗ್ರತೈಷಾಂ ರಾಶೀನಾಂ ಪ್ರಕೃತ್ಯಾ ನ ಭವತ್ಯಸೌ ।
ಯೋಗೇನ ಸೌಮ್ಯಪಾಪೈಶ್ಚ ಖೇಚರೈರ್ವೀಕ್ಷಿತೇನ ಚ ॥ 10 ॥

ಸೌಮ್ಯಾಶ್ರಿತತ್ವಾತ್ ಕ್ರೂರೋಽಪಿ ಸ ರಾಶಿಃ ಶೋಭನಃ ಸ್ಮೃತಃ ।
ಸೌಮ್ಯೋಽಪಿ ರಾಶಿಃ ಕ್ರೂರಃ ಸ್ಯಾತ್ ಕ್ರೂರಗ್ರಹಯುತೋ ಯದಿ ॥ 11 ॥

ಗ್ರಹಯೋಗಾವಲೋಕಾಭ್ಯಾಂ ರಾಶಿರ್ದತ್ತೇ ಗ್ರಹೋದ್ಭವಮ್ ।
ಫಲಂ ತಾಭ್ಯಾಂ ವಿಹೀನೋಽಸೌ ಸ್ವಭಾವಮುಪಸರ್ಪತಿ ॥ 12 ॥

ಶುಭಗ್ರಹ ಯೋಗದೃಷ್ಟಿಗಳಿಂದ ರಾಶಿಯು ತನ್ನ ದೋಷಫಲವನ್ನು ಬಿಟ್ಟು ಶುಭಫಲವನ್ನು ಕೊಡುತ್ತದೆ. ಶುಭಯೋಗದೃಷ್ಟಿ ಇಲ್ಲದಿದ್ದರೆ ತನ್ನ ಸ್ವಭಾವವನ್ನೇ ತೋರಿಸುತ್ತದೆ. ಹಾಗೆಯೇ ಶುಭರಾಶಿಗಳಲ್ಲಿ ಪಾಪಗ್ರಹಗಳಿದ್ದರೂ ಪಾಪಫಲವನ್ನೇ ಕೊಡುತ್ತವೆ. ಪಾಪಗ್ರಹಗಳಿಲ್ಲದಿದ್ದರೆ ಮಾತ್ರ ಶುಭಫಲ. ಯೋಗದೃಷ್ಟಿ ಗಳಿಲ್ಲದೆ ರಾಶಿ ಶುದ್ಧವಾಗಿದ್ದರೆ ತನ್ನ ಸ್ವಭಾವಾನುಸಾರ ಫಲವನ್ನು ನೀಡುತ್ತದೆ.

## ॥ ಗುಲಿಕೋದಯಾದಿಗಳಿಗೆ ಅಪವಾದ ॥

ವಾರೇಶೋ ಗುಲಿಕಂ ನಿಹಂತಿ ಬಲವಾನ್ ಮೂರ್ತೌ ಸ್ಥಿತಃ ಸದ್ಗ್ರಹೋ
ವಿಕ್ಷೇಪ್ತಾ ಯಮಕಂಟಕಸ್ಯ ಚ ಶುಭಃ ಕೇಂದ್ರತ್ರಿಕೋಣಸ್ಥಿತಃ ।
ಪೀಯೂಷತ್ವಿಷಿ ಸತ್ಕ್ರಿಯಾಜುಷಿ ಶುಭೈಃ ದೃಷ್ಟೇ ಶುಭಾಂಶಸ್ಥಿತೇ
ಲಗ್ನೇಶೇ ಚ ಬಲಾನ್ವಿತೇ ಸತಿ ಸತಾಂ ನಾರ್ಧಪ್ರಹಾರಾದ್ಭಯಮ್ ॥ 13 ॥

ವಾರಾಧಿಪತಿಯು ಶುಭನಾಗಿ ಬಲಿಷ್ಠನಾಗಿ ಲಗ್ನದಲ್ಲಿದ್ದರೆ ಗುಲಿಕದೋಷ ಹೋಗುತ್ತದೆ. ಕೇಂದ್ರತ್ರಿಕೋಣಗಳಲ್ಲಿ ಬಲಿಷ್ಠನಾದ ಶುಭಗ್ರಹನಿದ್ದರೆ ಯಮಕಂಟಕ ಭಯವಿಲ್ಲ. ಚಂದ್ರನು ಶುಭಕ್ರಿಯೆಯಲ್ಲಿದ್ದು ಶುಭಗ್ರಹಗಳಿಂದ ದೃಷ್ಟನಾಗಿ ಶುಭಾಂಶ ದಲ್ಲಿದ್ದರೆ, ಲಗ್ನಾಧಿಪತಿಯೂ ಬಲಿಷ್ಠನಾಗಿದ್ದರೆ ಅರ್ಧಪ್ರಹಾರನಿಂದ ಭಯವಿಲ್ಲ.

## ॥ ಮೃತ್ಯುದಗ್ಧಾದಿಯೋಗವುಳ್ಳ ರಾಶಿಗಳ ಅಪವಾದ ॥

ಯೇ ದಗ್ಧಾಖ್ಯಾ ರಾಶಯೋ ಮೃತ್ಯುಸಂಜ್ಞಾಃ
ಯೇ ಚ ಪ್ರೋಕ್ತಾಃ ಸ್ವಾಮಿದೃಷ್ಟಾಃ ಶುಭಾಸ್ತೇ ।
ವಾಗೀಶೇನ ಸ್ಫೀತವೀರ್ಯೇಣ ದೃಷ್ಟಾಃ
ಸಂಯುಕ್ತಾ ವಾ ಸರ್ವಕಾರ್ಯೇಷ್ವನಿಂದ್ಯಾಃ ॥ 14 ॥

ಮೃತ್ಯುದಗ್ಧಾದಿಯೋಗವುಳ್ಳ ರಾಶಿಗಳು ಅಧಿಪತಿಯಿಂದ ದೃಷ್ಟವಾಗಿದ್ದರೆ ಶುಭ. ಬಲಿಷ್ಠನಾದ ಗುರುವು ನೋಡಿದರೂ ಗುರುಯುಕ್ತವಾಗಿದ್ದರೂ ಆ ರಾಶಿಗಳು ಶುಭಗಳೆಂದೇ ತಿಳಿಯಬೇಕು

## ॥ ಮಾಸದಗ್ಧಾದಿಯೋಗಗಳ ಪರಿಹಾರ ॥

ಯೇ ದೋಷಾ ಮಾಸದಗ್ಧಾಖ್ಯಾಸ್ತಿಥಿಲಗ್ನಸಮುದ್ಭವಾಃ ।
ತೇ ಸರ್ವೇ ನಾಶಮಾಯಾಂತಿ ಕೇಂದ್ರಸ್ಥಾನೇ ಬೃಹಸ್ಪತೌ ॥ 15 ॥

ಕೇಂದ್ರದಲ್ಲಿ ಗುರುವಿದ್ದರೆ ಶಿಥಿಲಗ್ನಸಮುದ್ಭವಗಳಾದ ಮಾಸದಗ್ಧಾದಿಯೋಗ ಗಳು ಎಲ್ಲವೂ ನಾಶವಾಗುತ್ತವೆ.

## ॥ ಗ್ರಹಸ್ಥಿತಿಯಿಂದ ದೋಷಪರಿಹಾರ ॥

ಯಃ ಕುರುತೇ ಯಂ ದೋಷಂ ಗ್ರಹಃ ಸ್ವತುಂಗೇ ಸ್ಥಿತಃ ಸ್ವವರ್ಗೇ ವಾ ।
ಸೌಮ್ಯಗ್ರಹೇಣ ದೃಷ್ಟಃ ಸ ಏವ ತದ್ದೋಷಮಪಹರತಿ ॥ 16 ॥

ಯಾವ ಗ್ರಹವು ದೋಷಕಾರಿಯೋ ಆ ಗ್ರಹವು ಉಚ್ಚ ಅಥವಾ ಸ್ವಕ್ಷೇತ್ರ ದಲ್ಲಿದ್ದು ಸೌಮ್ಯಗ್ರಹದೃಷ್ಟವಾಗಿದ್ದರೆ ತನ್ನಿಂದುಂಟಾಗುವ ಎಲ್ಲಾ ದೋಷಗಳನ್ನೂ ಪರಿಹರಿಸುತ್ತದೆ.

## ॥ ದೃಷ್ಟಿದೋಷಕ್ಕೆ ಅಪವಾದ ॥

ಬಲಿನೌ ಚಂದ್ರಲಗ್ನೇಶೌ ಲಗ್ನಂ ಮೂರ್ಧೋದಯಂ ಯದಿ ।
ಅಸಪ್ತಮಸ್ಥಪಾಪಾನಾಂ ದೃಷ್ಟಿರ್ಲಗ್ನೇ ನ ದೋಷದಾ ॥ 17 ॥

ಚಂದ್ರ ಮತ್ತು ಲಗ್ನಾಧಿಪತಿಗಳು ಬಲಿಷ್ಠರಾಗಿದ್ದು ಲಗ್ನವು ಮೂರ್ಧೋದಯ ವಾಗಿದ್ದರೆ ಸಪ್ತಮದೃಷ್ಟಿ ಬಿಟ್ಟು ಇತರ ಪಾಪಗ್ರಹದೃಷ್ಟಿದೋಷವು ಪರಿಹಾರ ವಾಗುತ್ತದೆ.

ಸ್ವೋಚ್ಚ ಸ್ವಕ್ಷೇತ್ರಗತಃ ಕವಿರ್ಗುರುರ್ವಾ ಯದಾ ಲಗ್ನೇ ।
ನ ತದಾ ದುಷ್ಯತಿ ದೃಷ್ಟಿರ್ಮದನಗತಸ್ಯಾರ್ಕಜಸ್ಯ ರಾಹೋರ್ವಾ ॥ 18 ॥

ಗುರು ಅಥವಾ ಶುಕ್ರನು ಸ್ವೋಚ್ಚ ಸ್ವಕ್ಷೇತ್ರಗಳಲ್ಲಿ ಲಗ್ನದಲ್ಲಿದ್ದರೆ ಸಪ್ತಮಸ್ಥಿತ ಶನಿ ರಾಹುಗಳ ದೋಷ ಉಂಟಾಗುವುದಿಲ್ಲ

## ॥ ರಾಹೂದಯ ದೋಷಪರಿಹಾರ ॥

ಉಪರಾಗಾದುಪರಿಗತೇ ವರ್ಷಾರ್ಧೇ ತನುಗತೇ ಶುಭೇ ಬಲಿನಿ ।
ಉದಯೋಽಪಿ ತಮೋಗ್ರಹಯೋಃ ಶುಭದಃ ಶುಭಕರ್ಮಸು ಗ್ರಾಹ್ಯಃ ॥
॥ 19 ॥

ಗ್ರಹಣ ಮುಗಿದು 6 ತಿಂಗಳು ದಾಟಿದ್ದರೆ, ಲಗ್ನದಲ್ಲಿ ಬಲಿಷ್ಠನಾದ ಶುಭಗ್ರಹ ನಿದ್ದರೆ ರಾಹುಕೇತುಗಳ ಲಗ್ನಸ್ಥಿತಿ ದೋಷಕರವಲ್ಲ.

## ॥ ಉಭಯಪಾಪಿತ್ವಕ್ಕೆ ಪರಿಹಾರ ॥

ಲಗ್ನಸ್ಯ ಪಾಪದ್ವಯಮಧ್ಯಗತ್ವಂ
ದೋಷಂ ಗುರುಃ ಕೇಂದ್ರಗತೋ ಬಲಾಢ್ಯಃ ।

ಕೇಂದ್ರತ್ರಿಕೋಣೋಪಚಯೇಷು ಮೂರ್ತೇಃ
ಸ್ಥಿತಃ ಶುಭೋ ವಾ ಬಲವಾನ್ನಿಹಂತಿ ॥ 20 ॥

ಲಗ್ನಕ್ಕೆ ಉಭಯಪಾಪಿತ್ವವಿದ್ದರೆ ಕೇಂದ್ರದಲ್ಲಿ ಬಲಿಷ್ಠನಾದ ಗುರುವಾಗಲೀ, ಕೇಂದ್ರತ್ರಿಕೋಣ ಉಪಚಯಗಳಲ್ಲಿ ಬಲಿಷ್ಠನಾದ ಇತರ ಶುಭಗ್ರಹವಾಗಲೀ ಇದ್ದರೆ ಆ ದೋಷವು ಸಂಪೂರ್ಣ ಪರಿಹಾರವಾಗುತ್ತದೆ

## ॥ ಗ್ರಹಗಳ ಅನಿಷ್ಟ ಸ್ಥಿತಿದೋಷಪರಿಹಾರ ॥

ಕವೌ ಗುರೌ ವಾ ಬಲಿನಿ ಸ್ಥಿತೇ ತನೌ
ಶುಭೇನ ದೃಷ್ಟಃ ಶುಭವರ್ಗಗಃ ಶಶೀ ।
ವಿವರ್ಧಮಾನಃ ಶುಭಕೃಚ್ಚ ನಾಶುಭಂ
ಕರೋತಿ ತಿಷ್ಠನ್ನಪಿ ಷಷ್ಠರಿಃಫಯೋಃ ॥ 21 ॥

ಗುರು ಅಥವಾ ಶುಕ್ರನು ಬಲಿಷ್ಠನಾಗಿ ಲಗ್ನದಲ್ಲಿದ್ದರೆ, ಚಂದ್ರನಿಗೆ ಶುಕ್ಲಪಕ್ಷಸ್ಥಿತಿ, ಶುಭದೃಷ್ಟಿ, ಶುಭವರ್ಗಗಳಿದ್ದರೆ ಚಂದ್ರನ ಷಷ್ಠದ್ವಾದಶಸ್ಥಿತಿಯು ದೋಷಕರವಲ್ಲ.

ಕ್ರೂರಾಃ ಶುಭಾ ವಾ ವಪುಷೋ ಗ್ರಹಾ ಯೇ
ಸ್ಥಾನಾನ್ಯನಿಷ್ಟಾನಿ ಯದಾ ಪ್ರವಿಷ್ಟಾಃ
ತದಾ ಸ್ವತುಂಗೇ ಬಲಿನಃ ಸ್ವಭೇ ವಾ
ಯದಿ ಸ್ಥಿತಾಸ್ತೇ ಶುಭದಾ ಭವಂತಿ ॥ 22 ॥

ಶುಭಗ್ರಹಗಳಾಗಲೀ ಪಾಪಗ್ರಹಗಳಾಗಲೀ ಮುಹೂರ್ತಲಗ್ನದಿಂದ ಅನಿಷ್ಟ ಸ್ಥಾನದಲ್ಲಿದ್ದರೂ, ಆ ಗ್ರಹಗಳು ಉಚ್ಚ ಸ್ವಕ್ಷೇತ್ರಗಳಲ್ಲಿ ಬಲಿಷ್ಠರಾಗಿದ್ದರೆ ಶುಭಪ್ರದರಾಗುತ್ತಾರೆ.

## ॥ ಚಂದ್ರನಿಂದ ಎಲ್ಲ ದೋಷಗಳ ಪರಿಹಾರ ॥

ಮೂರ್ತೇಸ್ತ್ರಿಕೋಣಾಗಮಕಂಟಕೇಷು
ರವೀಂದುಜೀವರ್ಕ್ಷನವಾಂಶಸಂಸ್ಥಃ ।
ಸುಕರ್ಮಕೃನ್ನಿತ್ಯಮಶೇಷ ದೋಷಾನ್
ಮುಷ್ಣಾತಿ ವರ್ಧಿಷ್ಣುರನುಷ್ಣರಶ್ಮಿಃ ॥ 23 ॥

ಸ್ವಕ್ಷೇತ್ರ, ಸ್ವನವಾಂಶ, ರವಿಕ್ಷೇತ್ರ, ರವಿನವಾಂಶ, ಗುರುಕ್ಷೇತ್ರ, ಗುರುನವಾಂಶ ಗಳಲ್ಲಿದ್ದು ಶುಕ್ಲಪಕ್ಷದಲ್ಲಿರುವ ಚಂದ್ರನು ಶುಭಕರ್ಮಸ್ಥನಾಗಿ ಲಗ್ನದಿಂದ ಕೇಂದ್ರ ತ್ರಿಕೋಣ ಲಾಭಸ್ಥಾನದಲ್ಲಿದ್ದರೆ ಎಲ್ಲ ದೋಷಗಳನ್ನೂ ಪರಿಹರಿಸುತ್ತಾನೆ.

## ॥ ಉಪಸಂಹಾರ ॥

ಪ್ರಾಧಾನ್ಯೇನ ವ್ಯಾಹೃತಾಃ ಕೇಚಿದೇತೇ
ಯೋಗಾಃ ಸರ್ವೇ ಘ್ನಂತಿ ದೋಷಾನಶೇಷಾನ್ ।

ಅತ್ರಾನುಕ್ತಾಃ ಸಂತಿ ಚಾನ್ಯೇ ಸಹಸ್ರಂ
ನೈವೋಕ್ತಾಸ್ತೇ ಗ್ರಂಥಬಾಹುಲ್ಯಭೀತ್ಯಾ ॥ 24 ॥

ಪ್ರಧಾನವಾಗಿಯುಳ್ಳ ಅಪವಾದಗಳನ್ನು ಇಲ್ಲಿ ಸೂಚಿಸಲಾಗಿದೆ. ಇಲ್ಲಿ ತಿಳಿಸಿದ ಅಪವಾದಗಳು ಎಲ್ಲಾ ದೋಷಗಳನ್ನೂ ಪರಿಹರಿಸುತ್ತವೆ. ಇನ್ನೂ ಸಾವಿರಾರು ದೋಷಗಳೂ ಅವುಗಳ ಅಪವಾದಗಳೂ ಇವೆ. ಗ್ರಂಥವಿಸ್ತಾರಭಯದಿಂದ ಇಲ್ಲಿ ಅವುಗಳನ್ನು ಸೂಚಿಸಲಿಲ್ಲ.

ಅತ್ರೋಕ್ತಾ ಯೇ ವೀರ್ಯವಂತೋ ಹಿ ದೋಷಾಃ
ದೇಶಾಚಾರಾದ್ದುರ್ಬಲಾಸ್ತೇ ಭವಂತಿ ।
ಯೇಽನ್ಯೇ ದೇಶಾಚಾರಸಿದ್ಧಾಶ್ಚ ದೋಷಾಃ
ತೇಷಾಂ ದೇಶೇ ತತ್ರ ನೈವಾಪವಾದಃ ॥ 25 ॥

ಇಲ್ಲಿ ಹೇಳಿದ ಬಲಿಷ್ಠವಾದ ದೋಷಗಳು ದೇಶಾಚಾರಾನುಸಾರವಾಗಿ ಇರುವ ಈ ಅಪವಾದಗಳಿಂದ ದುರ್ಬಲವಾಗುತ್ತವೆ. ಇನ್ನು ಬೇರೆ ಬೇರೆ ಪ್ರದೇಶಗಳಲ್ಲಿರುವ ಆಚಾರಸಿದ್ಧವಾದ ದೋಷಗಳು ಈ ಅಪವಾದಗಳಿಂದ ಪರಿಹೃತವಾಗುವುದಿಲ್ಲ.

ಇಯಂತ ಏವಾತ್ರ ಗುಣಾಃ ಪ್ರದಿಷ್ಟಾಃ
ದೋಷಾಪವಾದಾಂಶ್ಚ ತಥಾಹುರನ್ಯೇ ।
ಯೇಷಾಂ ವಿಭೇದಾ ಬಹವೋಽತಿಸೂಕ್ಷ್ಮಾಃ
ಪ್ರಕೀರ್ತಿತಾ ವಿಸ್ತರತೋ ಮುನೀಂದ್ರೈಃ ॥ 26 ॥

ಇಲ್ಲಿ ಇಷ್ಟೇ ಗುಣದೋಷಗಳನ್ನೂ ಅಪವಾದಗಳನ್ನೂ ಹೇಳಿದ್ದೇವೆ. ಇವುಗಳ ಪ್ರಭೇದಗಳು ಅನೇಕವಾಗಿವೆ. ಅತಿಸೂಕ್ಷ್ಮವಾಗಿವೆ. ಅದನ್ನು ಋಷಿಮುನಿಗಳು ಬಹಳ ವಿಸ್ತಾರವಾಗಿ ತಮ್ಮ ತಮ್ಮ ಗ್ರಂಥಗಳಲ್ಲಿ ತಿಳಿಸಿರುತ್ತಾರೆ

॥ ಇತಿ ಮುಹೂರ್ತಮಾರ್ಗದರ್ಶಿನ್ಯಾಂ ಅಪವಾದಾಧ್ಯಾಯಃ ಚತುರ್ಥಃ ॥

* * *

# ॥ ಸಂಸ್ಕಾರ ಮುಹೂರ್ತಾಧ್ಯಾಯಃ ॥ 5 ॥

## ॥ ಸಂಸ್ಕಾರಮುಹೂರ್ತ ಸಾಮಾನ್ಯ ॥

ಇನ್ನು ಮುಂದೆ ಷೋಡಶಸಂಸ್ಕಾರಗಳಿಗೂ ಆನುಷಂಗಿಕವಾಗಿ ಬರುವ ಇತರ ಕೆಲವು ಕಾರ್ಯಗಳಿಗೂ ಮುಹೂರ್ತವಿವೇಚನೆ ಮಾಡಲಾಗುತ್ತದೆ.

**ಯಜ್ಞಾಧ್ಯಯನತಿಥ್ಯಾದೇಸ್ತಥಾ ಷೋಡಶಕರ್ಮಣಾಮ್ ।**
**ಪ್ರಯೋಜನಂ ಚ ವಿಜ್ಞೇಯಂ ತತ್ತತ್ಕಾಲವಿನಿರ್ಣಯಃ ॥ 1 ॥**

ಷೋಡಶಸಂಸ್ಕಾರಗಳು, ಯಜ್ಞ, ಅಧ್ಯಯನಕ್ಕೆ ಬೇಕಾದ ಅಥವಾ ನಿಷಿದ್ಧವಾದ ತಿಥಿ ಇತ್ಯಾದಿಗಳ ಜ್ಞಾನವೇ ಮುಹೂರ್ತಶಾಸ್ತ್ರದ ಮುಖ್ಯ ವಿಷಯ.

ಸಂಸ್ಕಾರಗಳು 4 ವಿಧ.

1. ದಿನನಿರ್ಣಯದ ಸಂಸ್ಕಾರಗಳು 2. ಮಾಸನಿರ್ಣಯದ ಸಂಸ್ಕಾರಗಳು 3. ವರ್ಷನಿಯಮದ ಸಂಸ್ಕಾರಗಳು 4. ಯಾವ ಕಾಲನಿಯಮವೂ ಇಲ್ಲದ ಸಂಸ್ಕಾರಗಳು.

ಮನುಸ್ಮೃತಿಯಲ್ಲಿ–

**ನಾಮಧೇಯಂ ದಶಮ್ಯಾಂ ತು ದ್ವಾದಶ್ಯಾಂ ವಾಽಸ್ಯ ಕಾರಯೇತ್ ।**
**ಪುಣ್ಯೇ ತಿಥೌ ಮುಹೂರ್ತೇ ವಾ ನಕ್ಷತ್ರೇ ವಾ ಗುಣಾನ್ವಿತೇ ॥ 2 ॥**

ಮನುಸ್ಮೃತಿ ಹೀಗೆ ಹೇಳುತ್ತದೆ– ಮಗು ಹುಟ್ಟಿ 11ನೆ ಅಥವಾ 12ನೆ ದಿನ ನಾಮಕರಣ ಮಾಡಬೇಕು. ಇತರ ಕಾರಣಗಳಿಂದ ಅದು ಸಾಧ್ಯವಾಗದಿದ್ದರೆ, ಒಳ್ಳೆಯ ತಿಥಿನಕ್ಷತ್ರಗಳಿರುವ ಪುಣ್ಯಮುಹೂರ್ತದಲ್ಲಿ ಮಾಡಬೇಕು. ಎರಡು ದಿವಸಗಳಲ್ಲಿಯೂ ವಿಷ್ಟ್ಯಾದಿ ಪ್ರಬಲ ದೋಷಗಳಿದ್ದರೆ ಬೇರೆ ದಿವಸ ಮಾಡಬಹುದೆಂದೂ ಇದೆ.

ಸೀಮಂತ ಪ್ರಕರಣದಲ್ಲಿ 'ಪತ್ಯುರಭಾವೇ ದೇವರಃ' ಎಂದು ಹೇಳಿರುವುದರಿಂದ ಸಂಸ್ಕಾರಗಳ ಕಾಲಕ್ಕೆ ಹಾಗೂ ಸಂಸ್ಕಾರಗಳಿಗೆ ಪ್ರಾಚೀನರು ಎಷ್ಟೊಂದು ಪ್ರಾಧಾನ್ಯವನ್ನು ಕೊಟ್ಟಿದ್ದಾರೆಂದು ನಮಗೆ ತಿಳಿಯುತ್ತದೆ.

ಪ್ರಯೋಗಪಾರಿಜಾತದಲ್ಲಿ ಸ್ಮೃತಿಭಾಸ್ಕರ–ಸೀಮಂತಪ್ರಕರಣದಲ್ಲಿ–

**ಮೃತೋ ದೇಶಾಂತರಗತೋ ಭರ್ತಾ ಚೇತ್ ಸಂಸ್ಕೃತೇಃ ಪುರಾ ।**
**ದೇವರೋ ವಾ ಗುರುರ್ವಾಪಿ ವಂಶ್ಯೋ ವಾಽಪಿ ಸಮಾಚರೇತ್ ॥ 3 ॥**

ಎನ್ನಲಾಗಿದೆ. ಅದೇ ರೀತಿ,

ಮಾಸಿ ಪ್ರಯುಕ್ತ ಕಾರ್ಯೇಷು ಮೂಢತ್ವಂ ಗುರುಶುಕ್ರಯೋಃ ।
ನ ದೋಷಕೃತ್ತದಾ ಮಾಸಲಕ್ಷಣೋ ಬಲವಾನಿತಿ ॥4॥

ದಿನಮಾಸಾದಿ ಕಾರ್ಯಗಳಿಗೆ ಮೌಢ್ಯಾದಿ ದೋಷಗಳನ್ನು ಪರಿಗಣಿಸುವ ಅಗತ್ಯವಿಲ್ಲ. ದಿನ ಮಾಸ ವಿಧಾನವು ಎಲ್ಲದಕ್ಕಿಂತ ಪ್ರಬಲ.

ಗರ್ಭಸಂಸ್ಕಾರಗಳು, ಉಪನಿಷ್ಕ್ರಮಣ, ಅನ್ನಪ್ರಾಶನಗಳು ಮಾಸನಿಯಮವುಳ್ಳ ಸಂಸ್ಕಾರಗಳು. ಚೌಲ, ಉಪನಯನ, ಗೋದಾನಗಳು ವರ್ಷನಿಯಮವುಳ್ಳ ಸಂಸ್ಕಾರಗಳು. ವೇದವ್ರತಾದಿಗಳು, ವಿವಾಹ, ಕಾಲನಿಯಮವಿಲ್ಲದ ಸಂಸ್ಕಾರಗಳು.

ಈ ಸಂಸ್ಕಾರಗಳ ಪೈಕಿ 4 ಸಂಸ್ಕಾರಗಳ ಬಗ್ಗೆ ಮಾತ್ರ ಉತ್ತರಾಯಣ, ಶುಕ್ಲಪಕ್ಷ, ಕಲ್ಯಾಣ ನಕ್ಷತ್ರಗಳಲ್ಲಿ ಆಗಬೇಕೆಂದು ಗೃಹ್ಯಸೂತ್ರ ಸೂಚಿಸುತ್ತದೆ. ಗೃಹ್ಯಸೂತ್ರದಲ್ಲಿ ಸೂಚಿತವಾದ ಸಂಸ್ಕಾರಗಳು ತ್ರೈವರ್ಣಿಕರಿಗೆ ಮಾತ್ರವಾಗಿದ್ದು ಕೆಲವು ವಿಷಯಗಳಲ್ಲಿ ಜ್ಯೋತಿಶ್ಶಾಸ್ತ್ರಕ್ಕೂ ಗೃಹ್ಯಸೂತ್ರಾದಿ ಪ್ರಯೋಗಸೂಚಕ ಶಾಸ್ತ್ರಕ್ಕೂ ವಿರೋಧ ಬಂದಾಗ ಪ್ರಯೋಗೋಕ್ತವನ್ನೇ ಮಾಡಬೇಕೆಂದು ಪ್ರಯೋಗ ಪಾರಿಜಾತದಲ್ಲಿ ಸೂಚನೆ ಇದೆ.

ಯತ್ರಾಗಮವಿರೋಧೋಽಸ್ತಿ ಪ್ರಯೋಗ ಜ್ಯೋತಿಷೋಕ್ತಯೋಃ ।
ಜ್ಯೋತಿಷೋಕ್ತಂ ವಿಹಾಯೈವ ಪ್ರಯೋಗೋಕ್ತಂ ಸಮಾಚರೇತ್ ॥5॥

ಕಾರಣವೇನೆಂದರೆ, ಪ್ರಯೋಗಶಾಸ್ತ್ರ ವಿಧಿಸಿದ ಮುಹೂರ್ತಗಳು ವೇದವನ್ನು ಅನುಸರಿಸಿವೆ. ಕೆಲವೇ ಜನರಿಗೆ, ಕೆಲವೇ ಸಂಸ್ಕಾರಗಳಿಗೆ ಸೀಮಿತವಾಗಿವೆ. ಜ್ಯೋತಿಶ್ಶಾಸ್ತ್ರದ ವಿಷಯವು ಅದಕ್ಕಿಂತ ಹೆಚ್ಚು ವ್ಯಾಪಕವಾಗಿದೆ. 'ಸಾವಕಾಶಶ್ರುತೇಃ ನಿರವಕಾಶಶ್ರುತಿರ್ಗರೀಯಸೀ' ಎಂಬ ನ್ಯಾಯದಂತೆ, ಬ್ರಾಹ್ಮೋದ್ವಾಹ ನಿತ್ಯೋಪನಯನಾದಿಗಳಿಗೆ ಮಾತ್ರ ಸೀಮಿತವಾದ ಗೃಹ್ಯಸೂತ್ರದ ಮುಹೂರ್ತವಿಧಿಯು ಹೆಚ್ಚು ಪ್ರಬಲ. ಆದ್ದರಿಂದ ಪ್ರಯೋಗೋಕ್ತ ಮುಹೂರ್ತವನ್ನೇ ಅನುಸರಿಸತಕ್ಕದ್ದು

## ॥ ಗರ್ಭಾಧಾನ ಮುಹೂರ್ತ ॥

ಮಿತ್ರಾಂತ್ಯಾಜಶ್ರವಣವರುಣಾ ವಾಯುಮೂಲೋತ್ತರಾರ್ಕಾಃ
ಶ್ರೇಷ್ಠಾಃ ಪಿತ್ರ್ಯತ್ರಿದಶಜನನೀದಸ್ರಪುಷ್ಯಾರ್ಧಭಾನಿ ।
ಮಧ್ಯಾನ್ಯಾಹುಃ ಪ್ರವರಸುಧೃಶಾಮಾದಿಮೇ ಸಂಗಮೇ ಜ್ಞಾಃ
ಕೈಶ್ಚಿತ್ತತ್ರ ತ್ರಿದಶಜನನೀ ತಾರಕಾ ನಿಂದ್ಯತೇ ಜ್ಞೈಃ ॥6॥

ರಾತ್ರಾವೇವ ಹಿ ತತ್ ಕಾರ್ಯಂ ಲಗ್ನೇ ಚಂದ್ರಃ ಶುಭೋ ಮತಃ ।
ಅಥ ಸಪ್ತಮಗಃ ಶುಕ್ರಃ ಕನ್ಯಾರಾಶಿಂ ವಿವರ್ಜಯೇತ್ ॥7॥

ಷಷ್ಠ್ಯಷ್ಟಮೀಪಂಚದಶೀಶ್ಚತುರ್ಥೀಂ
ಚತುರ್ದಶೀಮಪ್ಯುಭಯತ್ರ ಹಿತ್ವಾ ।

ಶೇಷಾಃ ಶುಭಾಃ ಸ್ಯುಸ್ತಿಥಯೋ ನಿಷೇಕೇ
ವಾರಾಃ ಶಶಾಂಕಾರ್ಯಸಿತೇಂದುಜಾನಾಮ್ ॥
ಜನ್ಮತ್ರಯಮಪಿ ತ್ಯಾಜ್ಯಂ ನಿಷೇಕೇ ತು ದ್ವಯೋರಪಿ ॥ 9 ॥

ನೇಕಕ್ಕೆ ಪ್ರಶಸ್ತ ನಕ್ಷತ್ರಗಳು: ರೋಹಿಣೀ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ, ಸ್ವಾತೀ, ಹಸ್ತಾ, ಮೂಲಾ, ಅನುರಾಧಾ, ಶ್ರವಣ, ಶತಭಿಷೆ, ರೇವತಿ –ಇವು ಉತ್ತಮ ನಕ್ಷತ್ರಗಳು

ಅಶ್ವಿನೀ, ಮೃಗಶಿರೆ, ಪುನರ್ವಸು, ಪುಷ್ಯ, ಮಖಾ, ಚಿತ್ರಾ, ಧನಿಷ್ಠಾ –ಇವು ಮಧ್ಯಮ ನಕ್ಷತ್ರಗಳು. ಕೆಲವರು ಪುನರ್ವಸು ಕೂಡದೆಂದು ಹೇಳುತ್ತಾರೆ. ಪತಿಪತ್ನಿಯರಿಬ್ಬರ ಜನ್ಮಾನುಜನ್ಮತ್ರಿಜನ್ಮಗಳನ್ನು ಬಿಡಬೇಕು

ರಾತ್ರಿಕಾಲ ವಿಹಿತ. ಇತರ ಕಾರ್ಯಗಳಿಗೆ ಲಗ್ನದಲ್ಲಿ ಚಂದ್ರನೂ, ಸಪ್ತಮದಲ್ಲಿ ಶುಕ್ರನೂ ನಿಷಿದ್ಧರಾಗಿದ್ದರೂ ನಿಷೇಕಕ್ಕೆ ಅದು ಹಿತ. ಕನ್ಯಾರಾಶಿ ಕೂಡದು. ಹುಣ್ಣಿಮೆ, ಅಮಾವಾಸ್ಯೆ, ಚತುರ್ಥೀ, ಷಷ್ಠಿ, ಅಷ್ಟಮೀ, ಚತುರ್ದಶಿಗಳನ್ನು 2 ಪಕ್ಷಗಳಲ್ಲಿಯೂ ಬಿಡಬೇಕು (ದಿನತ್ರಯವನ್ನೂ ಸಹ –ದಶಮಿ, ಏಕಾದಶೀ, ದ್ವಾದಶೀ). ಶುಭವಾರ ಗಳು ಶುಭಪ್ರದ.

## ॥ ಪುಂಸವನ ಮುಹೂರ್ತ ॥

ಕುರ್ಯಾತ್ ಪುಂಸವನಂ ಪ್ರಸಿದ್ಧವಿಷಯೇ ಗರ್ಭೇ ತೃತೀಯೇಽಥವಾ
ಮಾಸಿ ಸ್ಫೀತತನೌ ತುಷಾರಕಿರಣೇ ಪುಷ್ಯೇಽಥವಾ ವೈಷ್ಣವೇ ।
ಹಿತ್ವಾ ಕರ್ಕಟಕಂ ನೃಯುಗ್ಮಮಬಲಾಮನ್ಯೇಷ್ವರಿಕ್ತೇ ತಿಥೌ
ಶುದ್ಧೇ ನೈಧನಧಾಮ್ನಿ ಶುಕ್ರಶಶಭೃದ್ವಿನ್ಮಂತ್ರಿಣಾಂ ವಾಸರೇ ॥ 10 ॥

ಗರ್ಭಿಣಿ ಎಂದು ಗೊತ್ತಾದ ಅನಂತರ ಅಥವಾ 3ನೆ ತಿಂಗಳಿನಲ್ಲಿ (ಸಾವನ ಮಾಸ –ಋತುಸ್ನಾನದಿಂದ 30 ದಿನಕ್ಕೆ 1 ತಿಂಗಳು –ಈ ಕ್ರಮದಂತೆ) ಪುಷ್ಯಾನಕ್ಷತ್ರ ಅಥವಾ ಶ್ರವಣನಕ್ಷತ್ರದಲ್ಲಿ ಪ್ರಕಾಶಮಾನನಾದ ಚಂದ್ರನಿರುವಾಗ, ಮಿಥುನ–ಕರ್ಕಾಟಕ–ಕನ್ಯಾರಾಶಿಗಳನ್ನು ಬಿಟ್ಟು ಉಳಿದ ರಾಶಿಗಳಲ್ಲಿ ಚತುರ್ಥೀ–ನವಮೀ–ಚತುರ್ದಶಿಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿ ಅಷ್ಟಮ ಶುದ್ಧಿ ಇರುವ ಲಗ್ನದಲ್ಲಿ, ಶುಭವಾರಗಳಲ್ಲಿ –ಪುಂಸವನ ಪ್ರಶಸ್ತ

## ॥ ಸೀಮಂತ ಮುಹೂರ್ತ ॥

ರೋಹಿಣ್ಯೈಂದವಮಾದಿತ್ಯಂ ಪುಷ್ಯಹಸ್ತೋತ್ತರಾತ್ರಯಮ್ ।
ಪೌಷ್ಣಂ ವೈಷ್ಣವಭಂ ಚೈವ ಸೀಮಂತೇ ದಶಮಂ ಸ್ಮೃತಮ್ ॥ 11 ॥

ಪಕ್ಷಚ್ಛಿದ್ರಾಂ ಚ ರಿಕ್ತಾಂ ಚ ವಿನಾ ಪಿತೃದಿನಂ ತಥಾ ।
ಚತುರ್ಥೀ ಚ ಕದಾಚಿತ್ ಸ್ಯುಸ್ತಿಥಯಶ್ಚ ಶುಭಪ್ರದಾಃ ॥ 12 ॥

ಮೇಷ ಕುಂಭ ಮಕರಾಸ್ತು ಮಧ್ಯಮಾಃ
ಜ್ಞೇಂದುಜೀವಭೃಗುರಾಶಯಃ ಶುಭಾಃ ॥ 13॥

ವಧ್ವಾ ಜನ್ಮತ್ರಯಂ ವರ್ಜ್ಯಂ ಶುಕ್ಲಪಕ್ಷಃ ಶುಭಪ್ರದಃ ॥ 14 ॥

ರೋಹಿಣೀ, ಮೃಗಶಿರಾ, ಪುನರ್ವಸು, ಪುಷ್ಯಾ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ, ಹಸ್ತಾ, ಶ್ರವಣ, ರೇವತೀ –ಈ 10 ನಕ್ಷತ್ರಗಳು ಸೀಮಂತಕ್ಕೆ ಶುಭ. ಛಿದ್ರಾತಿಥಿಗಳು, ರಿಕ್ತಾತಿಥಿಗಳು, ಏಕಾದಶೀ, ಅಮಾವಾಸ್ಯೆ ಬಿಟ್ಟು ಉಳಿದ ತಿಥಿಗಳು ಪ್ರಶಸ್ತ. ಚತುರ್ಥೀ ಮಧ್ಯಮ. ಸಿಂಹ–ವೃಶ್ಚಿಕರಾಶಿಗಳು ಕೂಡದು. ಮೇಷ ಕುಂಭ ಮಕರಗಳು ಮಧ್ಯಮ ಉಳಿದ 7 ರಾಶಿಗಳು ಉತ್ತಮ. ಸೀಮಂತಕ್ಕೆ ಶುಕ್ಲಪಕ್ಷವಿರಬೇಕು ವಧುವಿನ ಜನ್ಮತ್ರಯಗಳನ್ನು ಬಿಡಬೇಕು.

ಸೀಮಂತಪ್ರಕರಣದಲ್ಲಿ, 'ಗರ್ಭಿಣ್ಯಾ ಏವ ಕರ್ತೃತ್ವಂ' ಎಂಬ ವಚನಾನುಸಾರ, ಕರ್ತೃದೋಷ–ತಾರಾನುಕೂಲತೆ ಆದಿಗಳನ್ನು ಪ್ರಧಾನವಾಗಿ ಗರ್ಭಿಣಿಗೆ ನೋಡತಕ್ಕದ್ದು

'ಚತುರ್ಥೇ ಗರ್ಭಮಾಸೇ ಸೀಮಂತೋನ್ನಯನಂ ಷಷ್ಠೇಽಷ್ಟಮೇ ವಾ' ಎಂಬ ಸೂತ್ರವಚನದಂತೆ 4ನೆ, 6ನೆ ಅಥವಾ 8ನೆ ತಿಂಗಳಿನಲ್ಲಿ ಸೀಮಂತೋನ್ನಯನ ವಾಗಬೇಕು

ಜ್ಯೋತಿರ್ವಸಿಷ್ಠರು ಹೀಗೆ ಹೇಳುತ್ತಾರೆ, 'ಚತುರ್ಥೇ ಸಪ್ತಮೇ ಮಾಸಿ ಷಷ್ಠೇ ವಾಽಪ್ಯಥವಾಽಷ್ಟಮೇ'. ಇಲ್ಲಿ ಗೃಹ್ಯಸೂತ್ರದಲ್ಲಿ ಸಪ್ತಮವನ್ನು ಹೇಳಿಲ್ಲ. ಯಾವುದಕ್ಕೆ ಹೆಚ್ಚು ಪ್ರಾಮಾಣ್ಯವೆಂಬ ಸಂದೇಹಪರಿಹಾರಕ್ಕೆ ಪ್ರಯೋಗಪಾರಿಜಾತಕಾರ ಹೇಳು ತ್ತಾರೆ–

ಅಸ್ಯ ಗೃಹ್ಯವಿರೋಧೇ ಸತ್ಯುಚ್ಯತೇ ಶ್ರೀಧರೀಯ ಸ್ಮೃತಿಭಾಸ್ಕರಯೋಃ–
ಯಸ್ಮಿನ್ ಕಾಲೇ ವಿರೋಧೋಽಸ್ತಿ ಜ್ಯೋತಿಷೋಕ್ತಾಗಮೋಕ್ತಯೋಃ ।
ಜ್ಯೋತಿಷೋಕ್ತಂ ವಿಹಾಯೈವ ಶ್ರುತಿಚೋದಿತಮಾಚರೇತ್ ॥

ಇದಕ್ಕೆ ಇನ್ನೊಂದು ಉತ್ತರವೂ ಇದೆ. 'ಕೌಷೀತಕಃ ಸಪ್ತಮೇ' ಎಂದು ಹೇಳಿರುವುದರಿಂದ ಕೌಷೀತಕ ಶಾಖೆಯವರಿಗೆ ಸಪ್ತಮವಾಗಬಹುದು ಕೌಷೀತಕ ಶಾಖೆಯ ಗೃಹ್ಯಸೂತ್ರದಲ್ಲಿ ಹಾಗೆ ಇರಲೂಬಹುದು. ಆಶ್ವಲಾಯನರು ಸಪ್ತಮ ಮಾಸದಲ್ಲಿ ಮಾಡಬಾರದು.

## ॥ ವಿಷ್ಣುಬಲಿ/ಜಾತಕರ್ಮ ॥

ಪಕ್ಷೇ ವಿಷ್ಣುಬಲಿಃ ಸಿತೇಽಜಹರಿಭೇ ಮಾಸೇಽಷ್ಟಮೇ ದ್ವಾದಶೀ–
ಸಪ್ತಮ್ಯೋರಪಿ ಜಾತಕರ್ಮ ತು ಸುತೇ ಜಾತೇ ಗತೇಽಘೇ ನ ಚೇತ್ ॥ 15 ॥

ವಿಷ್ಣುಬಲಿಯನ್ನು ಶುಕ್ಲಪಕ್ಷದಲ್ಲಿ ಮಾಡಬೇಕು 8ನೆ ತಿಂಗಳಿನಲ್ಲಿ ಆಗಬೇಕು. ನಕ್ಷತ್ರವನ್ನು ಪ್ರಧಾನವಾಗಿ ಗಣಿಸುವುದಾದರೆ ರೋಹಿಣೀ ಅಥವಾ ಶ್ರವಣದಲ್ಲಿ, ತಿಥಿಯನ್ನು ಪ್ರಧಾನವಾಗಿ [illegible] ಸಪ್ತಮಿ ಅಥವಾ ದ್ವಾದಶಿಯಲ್ಲಿ ಮಾಡಬೇಕು.

ಜಾತಕರ್ಮವನ್ನು ಆಶೌಚಾನಂತರ ಶುದ್ಧಿದಿನದಲ್ಲಿ ಮಾಡಬೇಕು.

## ॥ ನಾಮಕರಣ ॥

**ನಾಮಾಹ್ನಿ ದ್ವಾದಶೇಽತಃ ಪರಮಶುಭಮಹಃ ಪೂರ್ವಮಿಷ್ಟಂ ತುರೀಯೋ**
**ಭಾಗಃ ಕೌಷೀತಕಾನಾಮಪಿ ದಶಮನಿಶಿ ತ್ಯಜ್ಯತೇಽತ್ರಾಪರಾಹ್ಣಃ ।**
**ಚಿತ್ರಾಶೂರ್ಪೇಂದ್ರಪೂರ್ವಾಶ್ವ್ಯಹಿಯಮಶಿಖಿನೋಽಜ್ಯೈಣಜೂಕಾನಿಶಾದ್ಯ-**
**ತ್ರ್ಯಂಶೌ ಭೌಮಾರ್ಕಿವಾರೌ ವ್ಯಯವಿಹಗಮೃತಿಸ್ಥಾಸೃಜೋ ಜನ್ಮಭಂ ಚ ॥**
**॥ 16 ॥**

ನಾಮಕರಣವನ್ನು 11ನೆ ಅಥವಾ 12ನೆ ದಿನ ಮಾಡಬೇಕು. 13ನೆ ದಿನ ಕೂಡದು. ಅಪರಾಹ್ಣ ನಿಷಿದ್ಧ. ಅಶ್ವಿನೀ, ಭರಣೀ, ಕೃತ್ತಿಕೆ, ಆಶ್ಲೇಷಾ, ಹುಬ್ಬಾ, ಪೂರ್ವಾಷಾಢಾ, ಪೂರ್ವಾಭಾದ್ರಾ, ಚಿತ್ರಾ, ವಿಶಾಖಾ, ಜ್ಯೇಷ್ಠಾ ನಕ್ಷತ್ರಗಳನ್ನು ಬಿಡಬೇಕು. ಮೇಷ–ತುಲಾ–ಮಕರಗಳು ಕೂಡದು ರಾತ್ರಿಯ ಮೊದಲ 2 ಭಾಗಗಳು ಕೂಡದು. ಕುಜಶನಿವಾರಗಳನ್ನೂ ದ್ವಾದಶದಲ್ಲಿ ಗ್ರಹವನ್ನೂ ಅಷ್ಟಮದ ಅಂಗಾರಕನನ್ನೂ, ಮಗುವಿನ ಜನ್ಮನಕ್ಷತ್ರವನ್ನೂ ಬಿಡಬೇಕು.

12ನೆ ದಿನದಲ್ಲಿ ನಾಮಕರಣವಕ್ಷದಲ್ಲಿ ಸಂಸ್ಕಾರಕೌಸ್ತುಭ ಹೀಗೆ ಹೇಳುತ್ತದೆ– 'ತತಶ್ಚ ದ್ವಾದಶದಿನಾಂತ ಕಾಲೇಷು ನ ಪುಣ್ಯತಿಥಿನಕ್ಷತ್ರ ಚಂದ್ರಾನುಕೂಲ್ಯಾದಿ ಗುಣಾದರಃ'. ಏಕಾದಶೀ, ಮಹಾದೋಷಾದಿಗಳಲ್ಲಿ ಮಾತ್ರ ದಿನ ಬದಲಿಸಬೇಕು.

**ಏಕಾದಶೇಽಹ್ನಿ ವಿಪ್ರಾಣಾಂ ಕ್ಷತ್ರಿಯಾಣಾಂ ತ್ರಯೋದಶೇ ।**
**ವೈಶ್ಯಾನಾಂ ಷೋಡಶೇ ಕಾರ್ಯಂ ಮಾಸಾಂತೇ ಶೂದ್ರಜನ್ಮನಃ ॥ 17 ॥**

ಬ್ರಾಹ್ಮಣರಿಗೆ 11ನೆ ದಿವಸ, ಕ್ಷತ್ರಿಯರಿಗೆ 13ನೆ ದಿವಸ, ವೈಶ್ಯರಿಗೆ 16ನೆ ದಿವಸ, ಶೂದ್ರರಿಗೆ 30ನೆ ದಿವಸ ಆಶೌಚ ಶುದ್ಧ ಇದರಲ್ಲಿ ಪಕ್ಷಭೇದ. ಶೂದ್ರರಿಗೆ 16ನೆ ದಿನ ಶುದ್ಧವೆಂದು ಸಂಪ್ರದಾಯವಿದೆ– ಶೂದ್ರಜಾತಿಸ್ತು ಪಕ್ಷಂ'.

## ॥ ತೊಟ್ಟಿಲಿಗಿಡಲು ಮುಹೂರ್ತ ॥

**ಅಭೀಷ್ಟೇ ಪುಣ್ಯದಿವಸೇ ಚಂದ್ರತಾರಾಬಲಾನ್ವಿತೇ ।**
**ಮೃದುಧ್ರುವಕ್ಷಿಪ್ರಭೇಷು ಮಾತಾ ವಾ ಕುಲಯೋಷಿತಃ ॥ 18 ॥**
**ಯೋಗಶಾಯಿ ಹರಿಂ ಸ್ಮೃತ್ವಾ ಪ್ರಾಕ್ಶೀರ್ಷಂ ವಿನ್ಯಸೇಚ್ಛಿಶುಂ ॥ 19 ॥**

ಚಂದ್ರ ತಾರಾಬಲವಿರುವ ಇಷ್ಟವಾಗುವ ಪುಣ್ಯದಿವಸದಲ್ಲಿ ಮೃದುಧ್ರುವ, ಕ್ಷಿಪ್ರ ನಕ್ಷತ್ರಗಳಲ್ಲಿ ತಾಯಿ ಮತ್ತು ಕುಲಸ್ತ್ರೀಯರು ಯೋಗಶಾಯಿಯಾದ ಹರಿಯನ್ನು ಸ್ಮರಣೆಮಾಡಿ ಮಗುವನ್ನು ಪೂರ್ವಕ್ಕೆ ಶಿರಸ್ಸಿರುವಂತೆ ಇಡಬೇಕು.

## ॥ ಉಪನಿಷ್ಕ್ರಮಣಮ್ ॥

**ಏವಂ ನಿಷ್ಕ್ರಮಣಂ ಚತುರ್ಥೇ ಮಾಸಿ ತೃತೀಯೇ ವಾ**
**ಆಪೂರ್ಯಮಾಣಪಕ್ಷೇ ಪುಣ್ಯೇ ನಕ್ಷತ್ರೇ-**
**ರಿಕ್ತಾ ಷಷ್ಠ್ಯಷ್ಟಮೀದರ್ಶದ್ವಾದಶೀಶ್ಚ ವಿವರ್ಜಯೇತ್ ।**
**ಘಟಾಲಿಮೇಷಾ ವರ್ಜ್ಯಾಃ ಸ್ಯುಸ್ತಥೈವಾಧೋಮುಖಾನಿ ಚ ॥ 20 ॥**

ಉಪನಿಷ್ಕ್ರಮಣವು 3 ಅಥವಾ 4ನೆ ತಿಂಗಳಿನಲ್ಲಿ ಶುಕ್ಲಪಕ್ಷದಲ್ಲಿ ಒಳ್ಳೆಯ ನಕ್ಷತ್ರದಲ್ಲಿ ಆಗಬೇಕು. ರಿಕ್ತಾತಿಥಿಗಳನ್ನು ಷಷ್ಠಿ, ಅಷ್ಟಮಿ, ಏಕಾದಶೀ, ದ್ವಾದಶೀ, ಅಮಾವಾಸ್ಯೆ ಗಳನ್ನು ಬಿಡಬೇಕು. ಮೇಷ, ವೃಶ್ಚಿಕ, ಕುಂಭ ಮತ್ತು ಅಧೋಮುಖ ರಾಶಿಗಳು ವರ್ಜ್ಯ.

**ಊರ್ಧ್ವಾಸ್ಯೋ ರವಿಮುಕ್ತೋ ಯುಕ್ತೋ ರಾಶಿಸ್ತ್ವಧೋಮುಖೋ ಜ್ಞೇಯಃ ।**
**ಅಭಿಲಷಿತಸ್ತಿರ್ಯಾಸ್ಯಃ ತೇಷಾಂ ಕೇಂದ್ರಾಶ್ಚ ತತ್ಸಂಜ್ಞಾಃ ॥**

ರವಿಮುಕ್ತರಾಶಿಯು ಊರ್ಧ್ವಮುಖ. ರವಿಯುಕ್ತರಾಶಿಯು ಅಧೋಮುಖ ಅಭಿಲಷಿತ(ರವಿ ಬರಲಿರುವ) ರಾಶಿಯು ತಿರ್ಯಙ್ಮುಖ. ಆ ರಾಶಿಗಳ ಕೇಂದ್ರಗಳಿಗೂ ಅದೇ ಸಂಜ್ಞೆಗಳಿರುತ್ತವೆ.

## ॥ ಅನ್ನಪ್ರಾಶನ ॥

**ಷಷ್ಠೇ ಮಾಸ್ಯಶನಂ ನ ಸಪ್ತಮ ಇಹ ತ್ಯಾಜ್ಯೋ ಹರೇರ್ವಾಸರೋ**
**ಜ್ಯೇಷ್ಠಾದ್ರಾರ್ಯಮಕೃತ್ತಿಕೋರಗಮಖಾಃ ಪೂರ್ವಾವಿಶಾಖಾಸುರಾಃ ।**
**ರಂಧ್ರೇಽಸೃಗ್ಗ್ನಪುಷೀಂದುರಂಬುನಿ ಗುರುಃ ಜ್ಞೇಂದೂ ಶುಭೇ ಖೇಽಖಿಲಾಃ**
**ಭೌಮಕ್ಷೇತ್ರಝಷಾರ್ಧರಾತ್ರಗರಳದ್ರೇಕ್ಕಾಣ ಜನ್ಮೋಡು ಚ ॥ 22 ॥**

6ನೆ ತಿಂಗಳು ಅನ್ನಪ್ರಾಶನಕ್ಕೆ ಶುಭ. 7ನೆಯ ತಿಂಗಳು ನಿಷಿದ್ಧ. ಏಕಾದಶಿ ಹರಿವಾಸರಗಳನ್ನು ಬಿಡಬೇಕು ಭರಣಿ, ಕೃತ್ತಿಕೆ, ಆರ್ದ್ರೆ, ಆಶ್ಲೇಷೆ, ಮಖಾ, ಹುಬ್ಬಾ, ಪೂರ್ವಾಷಾಢಾ, ಪೂರ್ವಾಭಾದ್ರಾ, ವಿಶಾಖಾ, ಜ್ಯೇಷ್ಠಾ, ಮೂಲಾ –ಇವುಗಳು ತ್ಯಾಜ್ಯ. ಅಷ್ಟಮದಲ್ಲಿ ಕುಜ, ಲಗ್ನದಲ್ಲಿ ಚಂದ್ರ, ಚತುರ್ಥದಲ್ಲಿ ಗುರು, ನವಮದಲ್ಲಿ ಬುಧ–ಚಂದ್ರರು, ದಶಮದಲ್ಲಿ ಯಾವುದೇ ಗ್ರಹ ಇರಬಾರದು. ಮೇಷ–ವೃಶ್ಚಿಕ–ಮೀನರಾಶಿಗಳು ಕೂಡದು. ಅರ್ಧರಾತ್ರಿ ವರ್ಜ್ಯ ಜನ್ಮನಕ್ಷತ್ರ ಮತ್ತು ವಿಷದ್ರೇಕ್ಕಾಣಗಳು ಕೂಡದು.

## ॥ ವಿಷದ್ರೇಕ್ಕಾಣಗಳು ॥

ಪಾತಾತ್ರಿಕಟುಕಂ ಪಥ್ಯಂ ಪಥ್ಯಾ ರಾತ್ರಿರಿತಿ ಕ್ರಮಾತ್ ।
ವಿಷದ್ರೇಕ್ಕಾಣಸಂಜ್ಞೋಽಯಂ ಕಾಲೋಽನ್ನೇಽತೀವ ಗರ್ಹಿತಃ ॥ 23 ॥

ಮೇಷಾದಿ ರಾಶಿಗಳಲ್ಲಿ ಕ್ರಮವಾಗಿ 1, 2, 3, 1, 1, 1, 1, 1, 1, 1, 2, 2 ಇವು ವಿಷದ್ರೇಕ್ಕಾಣಗಳು

## ॥ ನವಾನ್ನಭೋಜನ ॥

ನವಾನ್ನೇ ಜನ್ಮರ್ಕ್ಷಂ ಪಿತೃನಿಋತಿಶೂರ್ಪಂ ಚ ಶುಭದಂ
ತಥಾ ಷಷ್ಠಾಂತ್ಯಸ್ಥೋ ವಿಧುರಹನಿ ವರ್ಷರ್ತುಶರದೋಃ ॥ 24 ॥

ನವಾನ್ನ ಭೋಜನಕ್ಕೆ ಜನ್ಮನಕ್ಷತ್ರ, ಮಖಾ, ಮೂಲಾ, ವಿಶಾಖಾ ಮತ್ತು ಅನ್ನಪ್ರಾಶನ ನಕ್ಷತ್ರಗಳೂ ಶುಭ ನವಾನ್ನವೆಂದರೆ ವಿಷುಸಂಕ್ರಮಣದ ಅನಂತರ ಉತ್ತು ಬಿತ್ತಿ ಬೆಳೆದ ಭತ್ತದ ತೆನೆಯಿಂದ ತೆಗೆದ ತಂಡುಲದ ಅನ್ನವೇ ನವಾನ್ನ. ಷಷ್ಠ-ದ್ವಾದಶಗಳಲ್ಲಿ ಚಂದ್ರನಿದ್ದರೂ ಮಧ್ಯಮವಾಗಿ ಆಗಬಹುದು. ಇದು ಹಗಲಿನಲ್ಲೇ ಆಗಬೇಕು. ನವಾನ್ನವನ್ನು ವರ್ಷರ್ತು, ಶರದೃತುಗಳಲ್ಲಿ ಮಾಡುವುದು ಸಂಪ್ರದಾಯ.

## ॥ ಕರ್ಣವೇಧ ॥

ಮಾಸೇ ಷಷ್ಠೇ ಸಪ್ತಮೇ ವಾಽಪ್ಯಷ್ಟಮೇ ಮಾಸಿ ವತ್ಸರೇ ।
ಕರ್ಣವೇಧಂ ಪ್ರಶಂಸಂತಿ ಪುಷ್ಟ್ಯಾಯುಃಶ್ರೀವಿವೃದ್ಧಯೇ ॥ 25 ॥

ಸೌಮ್ಯಾದಿತ್ಯರ್ಕ್ಷಾದಿತ್ಯುತ್ತರಾಶ್ಚ ಹಸ್ತಚಿತ್ರಾಶ್ವಿವಿಷ್ಣುಭಂ ।
ಧನಿಷ್ಠಾ ರೇವತೀ ಚೈವ ಶುಭಾಃ ಸ್ಯುಃ ಕರ್ಣವೇಧನೇ ॥ 26 ॥

ತುಲಾ ಚಾಪೇ ತು ಕುರ್ವೀತ ಕರ್ಣವೇಧಂ ಶುಭಂ ದ್ವಯೋಃ ।
ವೃಷಭೇ ಮಿಥುನೇ ಮೀನೇ ಕುಳೀರೇ ಕನ್ಯಕಾಸು ಚ ॥ 27 ॥

6ನೆ, 7ನೆ, 8ನೆ ತಿಂಗಳಿನಲ್ಲಿ ಅಥವಾ ವರ್ಷದೊಳಗೆ ಕರ್ಣವೇಧ ಮಾಡಬೇಕು. ಅಶ್ವಿನೀ, ಮೃಗಶಿರೆ, ಪುನರ್ವಸು, ಪುಷ್ಯಾ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ, ಹಸ್ತ, ಚಿತ್ರಾ, ಶ್ರವಣ, ಧನಿಷ್ಠಾ, ರೇವತೀ ಶುಭನಕ್ಷತ್ರಗಳು. ವೃಷಭ, ಮಿಥುನ, ಕರ್ಕಾಟಕ, ಕನ್ಯಾ, ತುಲಾ, ಮೀನ, ಧನುಗಳಲ್ಲಿ ಕರ್ಣವೇಧ ಶುಭ ನಿಷಿದ್ಧತಿಥಿಗಳನ್ನು ಬಿಟ್ಟು 2 ಪಕ್ಷಗಳಲ್ಲಿಯೂ ಆಗಬಹುದು.

## ॥ ಚೌಲ ॥

ಅಬ್ದೇ ಚೌಲಂ ತೃತೀಯೇ ವಿದಧತು ಜನನಾನ್ನೋ ಚತುರ್ಥೇ ನ ಷಷ್ಠೇ
ಭುಕ್ತ್ವೃಕ್ಷಂ ಸನ್ನಮಿತ್ರಂ ಖರದಿನಮಯನಂ ದಕ್ಷಿಣಂ ಪಕ್ಷತಿಶ್ಚ ।

ಪಕ್ಷೋಽಶುಕ್ಲಸ್ತ್ರಿಯಾಮಾ ಮಧುಪಹರಿಘಟಾ ಧರ್ಮ ಉಗ್ರೋಽಷ್ಟಮೋಽಸೃಕ್
ಜನ್ಮರ್ಕ್ಷಾಣೇಂದುರಂಗೇಽಪ್ಯುಪನಯಭಮಪಿ ಕ್ಷೌರಕರ್ಮಣ್ಯನಾದ್ಯೇ ॥ 28 ॥

3ನೇ ವರ್ಷದಲ್ಲಿ ಮಗುವಿಗೆ ಚೌಲ ಮಾಡಬೇಕು 4ನೆ ಮತ್ತು 6ನೆ ವರ್ಷಗಳಲ್ಲಿ ಕೂಡದು ಅನುರಾಧೆ ಬಿಟ್ಟು ಅನ್ನಪ್ರಾಶನ ನಕ್ಷತ್ರಗಳೆಲ್ಲಾ ಆಗಬಹುದು ಪಾಪವಾರ, ದಕ್ಷಿಣಾಯನ, ಪಾಡ್ಯ, ಕೃಷ್ಣಪಕ್ಷ, ರಾತ್ರಿಸಮಯಗಳು ವರ್ಜ್ಯ. ಸಿಂಹ, ವೃಶ್ಚಿಕ, ಕುಂಭರಾಶಿಗಳು ಕೂಡದು. ನವಮದಲ್ಲಿ ಕ್ರೂರಗ್ರಹವೂ, ಅಷ್ಟಮದಲ್ಲಿ ಅಂಗಾರಕನೂ, ಜನ್ಮಾನುಜನ್ಮ ತ್ರಿಜನ್ಮಗಳೂ, ಲಗ್ನದಲ್ಲಿ ಚಂದ್ರನೂ ತ್ಯಾಜ್ಯ. ಉಪನಯನದ ಅನಂತರ ಮಾಡುವ ಕ್ಷೌರಕ್ಕೆ ಉಪನಯನದ ನಕ್ಷತ್ರ ತ್ಯಾಜ್ಯ. ಮೊದಲ ಜನ್ಮನಕ್ಷತ್ರದಂತೆಯೇ ಉಪನಯನದ ನಕ್ಷತ್ರವೂ 2ನೆ ಜನ್ಮದ ಜನ್ಮನಕ್ಷತ್ರವೇ ಆಗಿರುತ್ತದೆ.

## ॥ ಅಕ್ಷರಾರಂಭ ॥

ಸೇಶಂ ಪ್ರಾಶನಭಂ ಶುಭಂ ನ ನವಮೀ ವರ್ಜ್ಯಾಽಕ್ಷರಾರಂಭಣೇ
ಸ್ವಾಧ್ಯಾಯತ್ವಮಿಹೋತ್ತರೇಽಪಿ ದಿವಸೇ ಸ್ಯಾದ್ವತ್ಸರಶ್ಚೌಲವತ್ ।
ವ್ಯಂತ್ಯತ್ರ್ಯಂಶ ನಿಶಾಂ ತ್ಯಜೇತ್ ಸ್ಥಿರಝಷಾನ್ ವಿಜ್ಞೌಢ್ಯಮಾರಂ ಮೃತೌ
ಧೀವಿತ್ತೋಗ್ರಕುಜಾರ್ಕ್ಯಹಾನಿ ಜನಿಭಂ ಚೇಂದೋರ್ದಿನಂ ನೇಷ್ಯತೇ ॥ 29 ॥

ಅಕ್ಷರಾರಂಭಕ್ಕೆ ಆರ್ದ್ರೆ ಮತ್ತು ಅನ್ನಪ್ರಾಶನನಕ್ಷತ್ರಗಳು ವಿಹಿತ ನವಮೀ ತಿಥಿಯು ಮಧ್ಯಮವಾಗಿ ಆಗಬಹುದು ಮಾರನೆ ದಿವಸ ಅನಧ್ಯಾಯ ದಿವಸ ವಾಗಿರಬಾರದು. ಚೌಲದಂತೆಯೇ 3ನೆ ವರ್ಷದಲ್ಲಿ ಮಾಡಬಹುದು. ರಾತ್ರಿಯನ್ನು 3 ಭಾಗಮಾಡಿ, ಮೊದಲ 2 ಭಾಗಗಳನ್ನು ಬಿಡಬೇಕು. ಸ್ಥಿರರಾಶಿಗಳನ್ನು ಮತ್ತು ಮೀನರಾಶಿಯನ್ನು ಬಿಡಬೇಕು. ಬುಧಮೌಢ್ಯ ವರ್ಜ್ಯ. ಅಷ್ಟಮದಲ್ಲಿ ಕುಜನು, ದ್ವಿತೀಯ ಪಂಚಮ ಭಾವಗಳಲ್ಲಿ ಉಗ್ರಗ್ರಹಗಳು ಇರಬಾರದು. ಕುಜವಾರ, ಶನಿವಾರ, ಸೋಮವಾರಗಳು ಅಶುಭ ಜನ್ಮನಕ್ಷತ್ರ ವರ್ಜ್ಯ.

## ॥ ಉಪನಯನ ಪ್ರಕರಣ ॥

### ॥ ವೇದ ಧರ್ಮಶಾಸ್ತ್ರಗಳಲ್ಲಿ ಕಾಲನಿರ್ಣಯ ॥

ಆಶ್ವಲಾಯನ ಗೃಹ್ಯಸೂತ್ರದಲ್ಲಿ 19ನೆ ಖಂಡದಲ್ಲಿ ಈ ರೀತಿ ಇದೆ–
ಅಷ್ಟಮೇ ವರ್ಷೇ ಬ್ರಾಹ್ಮಣಮುಪನಯೇತ್ । ಗರ್ಭಾಷ್ಟಮೇ ವಾ

ಇದು 'ಅಷ್ಟಮೇ ವರ್ಷೇ ಬ್ರಾಹ್ಮಣಮುಪನಯೀತ । ತಮಧ್ಯಾಪಯೀತ ಚ ॥' ಎಂಬ ವೇದವಿಧಿಯನ್ನು ಅನುಸರಿಸಿ ಹೇಳಿದ್ದಾಗಿರುತ್ತದೆ. ಮನುಸ್ಮೃತಿಯಲ್ಲಿ,

ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಂ ।
ಗರ್ಭಾದೇಕಾದಶೇ ರಾಜ್ಞೋ ಗರ್ಭಾಚ್ಚ ದ್ವಾದಶೇ ವಿಶಃ ॥ 30 ॥

ಎಂದು ಹೇಳಿರುತ್ತಾರೆ. ದ್ವಿಜತ್ವಸಿದ್ಧಿಗೋಸ್ಕರ ಮಾಡುವ ಈ ಉಪನಯನ ಸಂಸ್ಕಾರವು ಬ್ರಾಹ್ಮಣರಿಗೆ ಅತ್ಯಂತ ಮುಖ್ಯವಾಗಿರುತ್ತದೆ.

ವೇದದಲ್ಲಿ ಒಂದು ಕಡೆ ಉಪನಯನದ ಪ್ರಯೋಗವೇ ಇದೆ. ಈಗ ಅದನ್ನು ಅನುಸರಿಸಲು ಅಸಾಧ್ಯವಾಗಿರುತ್ತದೆ.

**ಆಚಾರ್ಯ ಉಪನಯಮಾನೋ ಬ್ರಹ್ಮಚಾರಿಣಂ ಕೃಣುತೇ ಗರ್ಭೇ ಅಂತಃ । ತಂ ರಾತ್ರೀಸ್ತಿಸ್ರ ಉದರೇ ಬಿಭರ್ತಿ ತಂ ದ್ರಷ್ಟುಂ ಜಾತಮಭಿ ಸಂಯಂತಿ ದೇವಾಃ ।।**

ಇದೇ ರೀತಿ, ಪ್ರತಿಯೊಂದರ ಪ್ರಯೋಗವೂ ವೇದದಲ್ಲಿ ಇದೆ ಎಂದು ಗೃಹ್ಯ ಸೂತ್ರ ಹಾಗೂ ಶೌನಕೀಯ ಹೇಳುತ್ತದೆ.

ಸಂಸ್ಕಾರವನ್ನು ವಿಧಿಸಿ, ಪ್ರಯೋಗವನ್ನು ನಿರೂಪಿಸಿ, ಅದರ ಕಾಲನಿರ್ಣಯ ವನ್ನೂ ವೇದವು ಸೂಚಿಸುತ್ತದೆ. ಆ ವೇದದ ನಿರ್ಣಯ ಪ್ರಕಾರ ಗೃಹ್ಯಸೂತ್ರಗಳು ಅದರ ಪ್ರಯೋಗಗಳನ್ನೂ, ಕಾಲನಿರ್ಣಯವನ್ನೂ ಸೂಕ್ಷ್ಮವಾಗಿ ನಿರೂಪಿಸುತ್ತವೆ ವ್ಯಾಖ್ಯಾನಕಾರರೂ, ಭಾಷ್ಯಕಾರರುಗಳೂ ಬಹಳ ವಿಸ್ತಾರವಾದ ವಿವರಣೆಯನ್ನು ಕೊಟ್ಟಿರುತ್ತಾರೆ.

'ಅಷ್ಟಮೇ ವರ್ಷೇ ಬ್ರಾಹ್ಮಣಮುಪನಯೀತ' ಎಂದು ಹೇಳುವ ವೇದವು 'ವಸಂತೇ ಬ್ರಾಹ್ಮಣಮುಪನಯೀತ' ಎಂದೂ ಹೇಳುತ್ತದೆ. ಆದ್ದರಿಂದ ವೇದವಿಧಿ ಪ್ರಕಾರ, 8ನೆಯ ವರ್ಷದಲ್ಲಿ ವಸಂತ ಋತುವಿನಲ್ಲಿ ಉಪನಯನವಾಗಬೇಕು.

**'ಪೂರ್ವಪಕ್ಷಂ ದೇವಾ ಅನ್ವಸೃಜ್ಯಂತ । ಅಪರಪಕ್ಷಮಸುರಾಃ । ತತೋ ದೇವಾ ಅಭವನ್ ಪರಾಸುರಾಃ । ಯಂ ಕಾಮಯೇತ ವಸೀಯಾನ್ ಸ್ಯಾದಿತಿ । ತಂ ಪೂರ್ವಪಕ್ಷೇ ಯಾಜಯೇತ್ । ವಸೀಯಾನೇವ ಭವತಿ । ಯಂ ಕಾಮಯೇತ ಪಾಪೀಯಾನ್ ಸ್ಯಾದಿತಿ । ತಮಪರಪಕ್ಷೇ ಯಾಜಯೇತ್ । ಪಾಪೀಯಾನೇವ ಭವತಿ । ತಸ್ಮಾತ್ ಪೂರ್ವಪಕ್ಷೋಽಪರಪಕ್ಷಾತ್ ಕರುಣ್ಯ- ತರಃ ।**

ಎಂದು ಯಜುರ್ವೇದದಲ್ಲಿ ಶುಕ್ಲಪಕ್ಷಪ್ರಶಂಸಾ ಕೃಷ್ಣಪಕ್ಷನಿಂದಾರೂಪದ ಕಥೆ ಇದ್ದು ಇದು ಶುಭಕಾರ್ಯಗಳನ್ನು ಶುಕ್ಲಪಕ್ಷದಲ್ಲಿ ಮಾಡಬೇಕೆಂಬ ವಿಧಿಯನ್ನು ಸೂಚಿಸುತ್ತದೆ. ಈ ರೀತಿ, ಜನ್ಮಾಷ್ಟಮ-ಗರ್ಭಾಷ್ಟಮಗಳಲ್ಲಿ, ವಸಂತ ಋತುವಿನಲ್ಲಿ, ಶುಕ್ಲಪಕ್ಷದಲ್ಲಿ, ಕಲ್ಯಾಣನಕ್ಷತ್ರದಲ್ಲಿ (ಶ್ರವಣಾದಿ-ತಚ್ಛ್ರೋಣೈತಿ ಶ್ರವ ಇಚ್ಛಮಾನಾ । ಪುಣ್ಯಂ ಶ್ಲೋಕಂ ಯಜಮಾನಾಯ ಕೃಣ್ವತೀ ।) ಉಪನಯನ ಮಾಡಬೇಕೆಂದು ವಿಧಿಯು ಹೊರಟಿತು.

ಆದರೆ ಈ ಸಮಯದಲ್ಲಿ ಉಪನಯನವನ್ನು ಮಾಡಲು ಅನನುಕೂಲತೆ ಯುಂಟಾದಾಗ ಏನು ಮಾಡಬೇಕೆಂಬ ಪ್ರಶ್ನೆಯು ಬರುತ್ತದೆ. ಅದಕ್ಕೆ ಮಹರ್ಷಿಗಳು 2 ತಿದ್ದುಪಡಿಗಳನ್ನು ತಂದರು

ಗರ್ಗಃ, 'ಮಾಘಾದಿ ಶುಕ್ರಾಂತಿಮಪಂಚಮಾಸಾಃ ಸಾಧಾರಣಾ ವಾ ಸಕಲ ದ್ವಿಜಾನಾಮ್ । ಇತಿ ಗರ್ಗೋಕ್ತೇಃ ವಸಂತಾಲಾಭೇ ಶಿಶಿರಗ್ರೀಷ್ಮಾವಪಿ ಗ್ರಾಹ್ಯೌ.

ಇಲ್ಲಿ ವಸಂತಋತುವನ್ನು ಬಿಟ್ಟು ಆಚೀಚಿನ ಶಿಶಿರ ಗ್ರೀಷ್ಮಋತುಗಳಲ್ಲಿಯೂ ಆಗಬಹುದೆಂದಾಯಿತು ಆದರೆ ವಸಂತದಲ್ಲೇ ಆಗಬೇಕೆಂದಿದ್ದರೆ ಇನ್ನೊಂದು ತಿದ್ದುಪಡಿ ಇದೆ. ವಸಂತಋತುವಿನ ವಿಧಿಬಲದಿಂದಾಗಿ, ಕೃಷ್ಣಪಕ್ಷ ಶ್ರೇಯಸ್ಕರ ವಲ್ಲವೆಂಬ ಸೂಚನೆಯನ್ನು ಸ್ವಲ್ಪಮಟ್ಟಿಗೆ ಹಿಂದಕ್ಕೆ ಸರಿಸುವುದು ಸರಿ ಎಂದು ಋಷಿಗಳು ಪ್ರತಿಪಾದಿಸುತ್ತಾರೆ

ವಿನಾರ್ತುನಾ ವಸಂತೇನ ಕೃಷ್ಣಪಕ್ಷೇ ಗಲಗ್ರಹೇ ।
ಅನಧ್ಯಾಯೇ ಚೋಪನೀತಃ ಪುನಃಸಂಸ್ಕಾರಮರ್ಹತಿ ॥ 31 ॥

ವಸಂತಋತುವಿನ ವಿಧಿ ಬಲವತ್ತರವಾದುದರಿಂದ ವಸಂತಋತುವಿನ 2 ತಿಂಗಳುಗಳಲ್ಲಿ ಕೃಷ್ಣಪಕ್ಷದೋಷ, ಗಲಗ್ರಹದೋಷ, ಅನಧ್ಯಾಯದೋಷಗಳು ಪ್ರಾಪ್ತವಾಗುವುದಿಲ್ಲ. ಬೇರೆ ದಿವಸವೇ ಸಿಗದಿದ್ದರೆ ಕೃಷ್ಣಪಕ್ಷ, ಗಲಗ್ರಹ, ಅನಧ್ಯಾಯ ದಿವಸಗಳನ್ನು ಉಪಯೋಗಿಸಿಕೊಂಡಾದರೂ ಅವುಗಳಲ್ಲಿ ಆದಷ್ಟು ಕಡಮೆ ದೋಷದ ಸುಮುಹೂರ್ತವನ್ನು ಆರಿಸಿಕೊಳ್ಳಬೇ. ಈ ಬಗ್ಗೆ ಧರ್ಮಶಾಸ್ತ್ರಗಳ ನಿಬಂಧಕಾರರು ತುಂಬಾ ಗಂಭೀರವಾಗಿ ಯೋಚಿಸಿದ್ದಾರೆ

ಸಾಮಾನ್ಯವಾಗಿ ಈ ಎಲ್ಲಾ ನಿಯಮಗಳನ್ನು ಜ್ಯೋತಿಶ್ಶಾಸ್ತ್ರವು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತದೆ. ಮುಹೂರ್ತಮಾಧವೀಯವು, 'ದುಷ್ಟಾಂಸ್ತಿಥ್ಯೃಕ್ಷ ತಾರಾನಧ ವಿಷಘಟಿಕಾಃ ಕೃಷ್ಣಪಕ್ಷಾಪರಾಹ್ಣೌ' ಎಂದು ತಿಥಿದೋಷ, ರಾಶಿದೋಷ, ನಕ್ಷತ್ರ ದೋಷ, ವಿಷಘಟಿ, ಇಡೀ ಕೃಷ್ಣಪಕ್ಷ, ಅಪರಾಹ್ಣಕಾಲ –ಮುಂತಾದ್ದನ್ನು ನಿಷೇಧಿ ಸುತ್ತದೆ. ಮುಹೂರ್ತಪದವೀಕಾರರು ಉಪನಯನ ಮುಹೂರ್ತವನ್ನು ಹೇಳುವಾಗ,

'ಕೃಷ್ಣೇ ಪಕ್ಷೇಽರ್ಕಜಾಸೃಗ್ದಿನಮಯನಮವಾಕ್ ವಕ್ಷತಿರ್ಮಧ್ಯಮಾ ವಾ' ಎಂದು ಉಪನಯನಕ್ಕೆ ಕೃಷ್ಣಪಕ್ಷವನ್ನು ಪೂರ್ತಿಯಾಗಿ ಬಿಡಬೇಕು. ಕುಜವಾರ, ಶನಿವಾರಗಳನ್ನು ಬಿಡಬೇಕು. ದಕ್ಷಿಣಾಯನವನ್ನು ಬಿಡಬೇಕು ಪಾಡ್ಯವನ್ನು ಮಧ್ಯಮವಾಗಿ ಇಟ್ಟುಕೊಳ್ಳಬಹುದು ಎನ್ನುತ್ತಾರೆ.

ಇದೇ ರೀತಿ ಹಲವು ಋಷಿಮುನಿಗಳು ಪಾಡ್ಯವಾಗಬಹುದು, ತ್ರಯೋದಶಿ ಆಗಬಹುದು, ಸಪ್ತಮಿ ಆಗಬಹುದು ಎಂದು ವಿಧಿಸಿದ್ದಾರೆ. ಇದನ್ನನುಸರಿಸಿ, ಪಾಡ್ಯ ಸಪ್ತಮಿ ತ್ರಯೋದಶಿಗಳು ಉಪನಯನ ಮುಹೂರ್ತಕ್ಕೆ ಪ್ರಶಸ್ತವೆನ್ನುವ ಭಾವನೆ ಬಂತು ಇದರ ಬಗ್ಗೆ ಧರ್ಮಸಿಂಧುಕಾರ ವಿಮರ್ಶಿಸುತ್ತಾ,

'ಕ್ವಚಿತ್ ಸಪ್ತಮೀ ತ್ರಯೋದಶೀ ಕೃಷ್ಣಪ್ರತಿಪದ್ವಿಧಿಃ ಪುನರುಪನಯನ ಮೂಕಾ ದ್ಯುಪನಯನ ವಿಷಯಃ' (ತಿಥಿವಿಚಾರಃ ಪು 167) ಎಂದು ಸಿದ್ಧಾಂತಿಸುತ್ತಾರೆ. ಧರ್ಮಶಾಸ್ತ್ರಕಾರರ ಈ ಮಾತನ್ನು ನಾವು ಪ್ರಮಾಣವೆಂದೇ ಒಪ್ಪಿಕೊಳ್ಳಬೇಕಾಗುತ್ತದೆ ಯಾಕೆಂದರೆ ಬೃಹಸ್ಪತಿ ಮೊದಲಾದ ಆಚಾರ್ಯರು, ಗರ್ಗ ಮೊದಲಾದ ಋಷಿಗಳು

ರಚಿಸಿರುವ ಸಮಗ್ರ ಗ್ರಂಥಗಳು ನಮಗೆ ಅಲಭ್ಯವಾಗಿರುವುದರಿಂದ ಯಾವ ಪ್ರಕರಣದಲ್ಲಿ ಅವರು ಏನನ್ನು ಹೇಳಿದ್ದಾರೆ, ಎಂದು ನಾವು ಸ್ಪಷ್ಟವಾಗಿ ತಿಳಿಯುವುದು ಕಷ್ಟ. ಆದ್ದರಿಂದ ಮೂಕೋಪನಯನ ಪುನರುಪನಯನಾದಿಗಳಿಗೆ ಹೇಳಿದ ಅನಧ್ಯಾಯಾದಿ ದುಷ್ಟದಿನಗಳು ನಿತ್ಯೋಪನಯನಕ್ಕೆ ಖಂಡಿತ ಪ್ರಶಸ್ತವಲ್ಲ. ಪುನರುಪನಯನಾದಿಗಳಲ್ಲಿ ವೇದಾಧ್ಯಯನವು ಮೊದಲೇ ಪ್ರಾರಂಭವಾಗಿರುವುದರಿಂದ ಪುನರುಪನಯನಾದಿ ವಿಷಯಗಳಿಗೆ ಅನಧ್ಯಾಯಾದಿಗಳು ಬಾಧಕವಲ್ಲವೆಂದು ಹಿಂದಿನವರು ನಿಶ್ಚಯಿಸಿದರು. ಪ್ರಕರಣ ಯಾವುದೆಂದು ನಮಗೆ ತಿಳಿಯದ್ದರಿಂದ ಅದು ಎಲ್ಲದಕ್ಕೂ ಪ್ರಶಸ್ತವೆಂದು ನಾವು ತಪ್ಪು ತಿಳಿದುಕೊಳ್ಳುವ ಹಾಗಾಯಿತು ಆದ್ದರಿಂದ, ಮುಹೂರ್ತಶಾಸ್ತ್ರವು ನಿರ್ದುಷ್ಟವಾಗಿರಲು ಧರ್ಮಶಾಸ್ತ್ರಗಳನ್ನು ನಾವು ಆಶ್ರಯಿಸಬೇಕಾಗುತ್ತದೆ

## ॥ ಗುರುಬಲವಿಚಾರ ॥

ಉಪನಯನದಲ್ಲಿ ಇನ್ನೊಂದು ಚರ್ಚಾಸ್ಪದ ವಿಷಯವಿದೆ. ಸಾಮಾನ್ಯವಾಗಿ ಸಮಾಜದ ಜನರಿಗೆಲ್ಲಾ ತಮ್ಮ ಹುಡುಗನಿಗೆ ಉಪನಯನಕ್ಕೆ ಗುರುಬಲ ಬೇಕೆಂದು ಗೊತ್ತು. ಗುರುಬಲವೆಂದರೆ ಹುಡುಗನ ಜನ್ಮರಾಶಿಯಿಂದ ಅನುಕೂಲ ಸ್ಥಾನದಲ್ಲಿ ಗುರು ಇರಬೇಕು. ಪ್ರತಿಕೂಲ ಸ್ಥಾನದಲ್ಲಿ ಇರಬಾರದು.

**ಜನ್ಮತೋಽಷ್ಟಮ ಸಹೋದರಸ್ಥಿತೋ ಮೃತ್ಯುದೋ ಜನಿಗತಶ್ಚ ರೋಗದಃ ।**
**ಕ್ಲೇಶದೋ ರಿಪುಗತೋಽಂತ್ಯಭಸ್ಥಿತಃ ಪೀಡಿತಃ ಸುಖಗತೋ ಭಯಪ್ರದಃ ॥ 32 ॥**

ಈ ಶ್ಲೋಕಪ್ರಕಾರ 1, 3, 4, 6, 8, 12ನೆ ಸ್ಥಾನಗಳಲ್ಲಿ ಗೋಚರದಲ್ಲಿ ಗುರು ಇರಬಾರದೆಂದಿದೆ. ಹೀಗೆ ಗುರುಬಲವಿಲ್ಲದಿದ್ದರೆ ಗುರುಬಲವಿರುವಾಗ ಉಪನಯನವನ್ನು ಮಾಡಬೇಕು. ಅಥವಾ ಬೃಹಸ್ಪತಿಶಾಂತಿಯನ್ನು ಮಾಡಿ ಉಪನಯನ ಮಾಡಬೇಕೆಂದಿದೆ. ದಶಮದ ಗುರುವಿಗೆ ಗೋಚರದಲ್ಲಿ ದೋಷಫಲವನ್ನು ಹೇಳಿರುವುದರಿಂದ ಅದೂ ಪ್ರತಿಕೂಲಸ್ಥಾನವೇ.

## ಪ್ರಯೋಗಪಾರಿಜಾತಕೇ–

**ದ್ವಿಜನ್ಮವರ್ಷಕಾಲೇ ಪ್ರಾಕ್ ಪ್ರೋಕ್ತೇ ವರ್ಷೇ ಗುರೌ ಯದಿ ।**
**ಗತೇ ವಿರೋಧೇ ವರ್ಷಂ ಸ್ಯಾತ್ ಬಲವಚ್ಛ್ರುತಿಚೋದನಾತ್ ॥ 33 ॥**
**ಗುರೋರ್ಗತಿಃ ಸ್ಮೃತಿಪ್ರೋಕ್ತಾ ವಿಬಲಾ ಹಿ ಶ್ರುತೇಃ ಸ್ಮೃತಿಃ ॥ 34 ॥**

ತಸ್ಮಾದ್ಗರ್ಭಾಷ್ಟಮೇ ವರ್ಷೇ ಪ್ರಾಪ್ತೇ ಗ್ರಹದೋಷಸ್ಯ ಶಾಂತಿಂ ಕೃತ್ವಾ ಮೌಂಜೀಬಂಧನಂ ಕರ್ತವ್ಯಂ ॥

ಬೃಹಸ್ಪತಿಃ

**ಅಶುಭೇಽಬ್ದೇ ಗ್ರಹಾಃ ಸರ್ವೇ ಶುಭಗೋಚರಗಾ ಯದಿ ।**
**ಶಾಂತ್ಯಭಾವಾಚ್ಚ ಮುಂಜೇ ನೈವ ಯಾತ್ಯಬ್ದಃ ಕಾಲಮೃತ್ಯುವತ್ ॥ 35 ॥**

**ತಸ್ಮಾದ್ಗ್ರಹೇಭ್ಯಃ ಕಾಲತ್ವಾತ್ ಬಲೀ ಸಂವತ್ಸರಃ ಸ್ಮೃತಃ ।**
**ಶಾಂತಿರ್ಗ್ರಹಾಣಾಂ ಕರ್ತವ್ಯಾ ನ ತು ಸಂವತ್ಸರಸ್ಯ ಚ ॥ 36 ॥**

ಆದ್ದರಿಂದ ಸರಿಯಾದ ಪ್ರಾಯದಲ್ಲಿ ಗುರುಬಲವಿಲ್ಲದಿದ್ದರೂ ಶಾಂತಿಮಾಡಿ ಉಪನಯನ ಮಾಡಬೇಕು.

ಪ್ರಯೋಗವಾರಿಜಾತಕದಲ್ಲಿ ಹೇಳುವಂತೆ 8ನೇ ವರ್ಷದಲ್ಲಿ ಗುರುವು ಪ್ರತಿಕೂಲನಾಗಿದ್ದರೂ ವೇದದ ವಿಧಿಬಲದಿಂದಾಗಿ ಉಪನಯನಕ್ಕೆ ದೋಷಕರನಲ್ಲ ಏಕೆಂದರೆ ಸ್ಮೃತಿಪ್ರಮಾಣಕ್ಕಿಂತ ಶ್ರುತಿಪ್ರಮಾಣ ಬಲಿಷ್ಠ. ಆದ್ದರಿಂದ ಗರ್ಭಾಷ್ಟಮ ವರ್ಷದಲ್ಲಿ ಗ್ರಹದೋಷಕ್ಕೆ ಶಾಂತಿ ಮಾಡಿಯಾದರೂ ಉಪನಯನ ಮಾಡಬೇಕು

ಗ್ರಹಗಳ ಪ್ರತಿಕೂಲತೆಯಿಂದ ಬರುವ ದೋಷಕ್ಕಿಂತ ವೇದವು ವಿಧಿಸಿದ ಸಂಸ್ಕಾರದ ಪ್ರಾಯವನ್ನು ಮೀರುವುದು ಹೆಚ್ಚು ದೋಷಕರವೆಂದು ಬೃಹಸ್ಪತಿ ಹೇಳುತ್ತಾರೆ. ಧರ್ಮಶಾಸ್ತ್ರಗಳಲ್ಲಿ ಇನ್ನೊಂದು ಪರಿಹಾರವನ್ನು ಸೂಚಿಸಿದ್ದಾರೆ–

**ಶುದ್ಧಿರ್ನೈವ ಗುರೋರ್ಯಸ್ಯ ವರ್ಷೇ ಪ್ರಾಪ್ತೇಽಷ್ಟಮೇ ಯದಿ ।**
**ಚೈತ್ರೇ ಮೀನಗತೇ ಭಾನೌ ತಸ್ಯೋಪನಯನಂ ಸ್ಮೃತಮ್ ॥ 37 ॥**

ಜನ್ಮಾಷ್ಟಮ–ಗರ್ಭಾಷ್ಟಮಗಳಲ್ಲಿ ಗುರುಬಲವಿಲ್ಲದಿದ್ದರೆ ಚೈತ್ರ ಮೀನದಲ್ಲಿ ಉಪನಯನ ಮಾಡಬೇಕು ಆಗ ಪರಿಹಾರದ ಅಗತ್ಯವಿಲ್ಲ ಮುಖ್ಯ ಕಾಲದ ಪ್ರಾಬಲ್ಯದಿಂದಾಗಿ ಗುರುದೋಷವುಂಟಾಗುವುದಿಲ್ಲ. ಈ ಗುರುದೋಷಕ್ಕೆ ಇನ್ನೂ 2 ತರದ ಅಪವಾದಗಳಿವೆ.

**ಝಷಚಾಪಕುಲೀರಸ್ಥೇ ಜೀವೇಽತ್ಯಶುಭಗೋಚರೇ ।**
**ಅತಿಶೋಭನತಾಂ ದದ್ಯಾದ್ವಿವಾಹೋಪನಯಾದಿಷು ॥ 38 ॥**

ಕರ್ಕಾಟಕ ಧನು ಮೀನ ರಾಶಿಗಳಲ್ಲಿರುವ ಗುರುವು ಅತಿ ಅನಿಷ್ಟಸ್ಥಾನ ದಲ್ಲಿದ್ದರೂ ಸಹ ವಿವಾಹ ಉಪನಯನಾದಿಗಳಿಗೆ ಶುಭಪ್ರದನಾಗಿರುತ್ತಾನೆ. ಪರಿಹಾರದ ಅಗತ್ಯವಿಲ್ಲ

'ಬಲಯೋಗಾತ್ ಫಲಮಂಶಕರ್ಕ್ಷಯೋಃ' ಎಂಬ ಜ್ಯೋತಿಷದ ನ್ಯಾಯದಂತೆ ಉಚ್ಚ ಸ್ವಕ್ಷೇತ್ರಗಳ ಅಂಶಕದಲ್ಲಿರುವ ಗುರುವೂ ಶುಭಪ್ರದನೇ ಎಂದು ತಿಳಿಯ ಬಹುದು.

## ॥ ವಯೋನಿಯಮ ॥

'ಗರ್ಭಾಷ್ಟಮೇಷು ಬ್ರಾಹ್ಮಣಮುಪನಯೀತ' ಎಂಬ ಗೃಹ್ಯವಚನವು ಪಂಚ ವರ್ಷಾದಾರಭ್ಯ ಗರ್ಭಾಷ್ಟಮಕಾಲಪರ್ಯಂತಂ ಮುಖ್ಯಕಾಲ ಇತಿ ಪ್ರತಿಪಾದ ನಾಯ. ಈ ಮೂಲಕ ಗೃಹ್ಯಸೂತ್ರವು 5ರಿಂದ 8ನೆ ವರ್ಷದ ವರೆಗೆ ಉಪನಯನ ಕಾಲವೆಂದು ವಿಧಿಸುತ್ತದೆ ಉಪನಯನವಿಲ್ಲದೆ 8ನೆ ವರ್ಷ ದಾಟುವುದು ಮಹಾದೋಷಕರವೆಂದು ಹೇಮಾದ್ರಿಯಲ್ಲಿ ವಿವರಿಸಿದೆ. (ಪು 531)

ಜನ್ಮಗರ್ಭಾಷ್ಟಮೇ ರಾಜನ್ ವ್ಯತಿಕ್ರಮ್ಯ ವಿದನ್ನಪಿ ।
ಗೌಣಕಾಲೇಷು ಪುತ್ರಾಣಾಂ ವ್ರತಬಂಧಂ ಯದಾ ಚರೇತ್ ॥ 39 ॥

ತದಾ ಪಿತಾ ಮಹತ್‌ಪಾಪಮವಾಪ್ಯ ರಘುನಂದನ ।
ಸಪುತ್ರಃ ಪಾಪಕರ್ಮಾ ಸ್ಯಾದುಭೌ ತೌ ಪಾಪಸಂಭವೌ ॥ 40 ॥

8ನೆ ವರ್ಷ ದಾಟಿ ಗೌಣಕಾಲದಲ್ಲಿ ಉಪನಯನ ಮಾಡಿದರೆ ಮಗ ಮತ್ತು ತಂದೆ ಇಬ್ಬರೂ ಪಾಪಕರ್ಮ ಮಾಡಿದ ಹಾಗಾಗುತ್ತದೆ. 'ಅಷ್ಟಮಾಬ್ದಂ ಲಂಘಯಿತ್ವಾ ಶಾಸ್ತ್ರೋಕ್ತಂ ಚ ಚರೇದ್ ವ್ರತಂ ॥' 8ನೇ ವರ್ಷ ಮೀರಿದರೆ ಶಾಸ್ತ್ರೋಕ್ತವಾದ ಪ್ರತಾಚರಣೆ ಬೇಕೆಂದು ಹೇಳುತ್ತಾರೆ.

ಅಷ್ಟಮಾಬ್ದಂ ಲಂಘಯಿತ್ವಾ ಪ್ರಾಜಾಪತ್ಯಂ ಚರೇದ್ ವ್ರತಮ್ ।
ನವಮೇ ತಪ್ತಕೃಚ್ಛ್ರಂ ಸ್ಯಾದ್ದಶಮೇ ಚೋಭಯವ್ರತಮ್ ॥ 41 ॥

8ನೇ ವರ್ಷವನ್ನು ಮೀರಿದರೆ ಪ್ರಾಜಾಪತ್ಯವ್ರತವನ್ನು ಮಾಡಬೇಕು

9ನೆ ವರ್ಷದಲ್ಲಿ ಉಪನಯನ ಮಾಡಲು ತಪ್ತಕೃಚ್ಛ್ರ ವ್ರತವನ್ನೂ 10ನೇ ವರ್ಷದಲ್ಲಿ ಮಾಡಲು ಎರಡನ್ನೂ ಮಾಡಬೇಕು.

ಸ್ಮೃತಿಗಳಲ್ಲಿ ಹೇಳಿರುವ 'ಕಾಮಚಾರಾಃ ಕಾಮವಾದಾಃ ಕಾಮಭಕ್ಷಾಃ' ಎಂಬುದು 8 ವರ್ಷದ ವರೆಗೆ ಮಾತ್ರವಿರುತ್ತದೆ. ಉಪನಯನಕಾಲದ ಅನಂತರ ಹುಡುಗನು ದಿನಚರ್ಯೆಯನ್ನು ಬದಲಿಸಬೇಕು. ಬದಲಿಸದಿದ್ದರೆ ಆ ತಪ್ಪಿಗೆ ತಂದೆ ಪ್ರಾಯಶ್ಚಿತ್ತವನ್ನು ಮಾಡಬೇಕೆಂಬುದು ಇದರ ತಾತ್ಪರ್ಯ.

ಪರಾಶರಮಹರ್ಷಿಗಳ ಅಭಿಪ್ರಾಯ ಹೀಗೆ–

ಬಾಲೇ ತು ಬಲಹೀನೇಽಪಿ ಗರ್ಭಿಣ್ಯಾಮಪಿ ಮಾತರಿ ।
ಯೋ ಯದೀಚ್ಛೇದ್ದ್ವಿಜನ್ಮತ್ವಂ ಚಾಷ್ಟಮಾಬ್ದಂ ನ ಲಂಘಯೇತ್ ॥ 42 ॥

ಬಾಲನು ಬಲಹೀನನಾಗಿದ್ದರೂ ತಾಯಿಯು ಗರ್ಭಿಣಿಯಾಗಿದ್ದರೂ ದ್ವಿಜನ್ಮತ್ವ ಬೇಕೆಂದಿದ್ದರೆ 8ನೆ ವರ್ಷವನ್ನು ದಾಟಬಾರದು.

ಗೌತಮ–

ನವಮೋ ದಶಮೋಽಬ್ದೇ ಚ ವ್ರತಬಂಧೋಽಸ್ಯ ಮಧ್ಯಮಃ ।
ಏಕಾದಶೇ ದ್ವಾದಶೇ ಚ ಕನೀಯಾನ್ ಪರಿಕೀರ್ತಿತಃ ॥ 43 ॥

ಗೌತಮರೆನ್ನುವಂತೆ ಉಪನಯನಕ್ಕೆ 9 ಮತ್ತು 10ನೆ ವರ್ಷ ಮಧ್ಯಮ. 11, 12ನೆ ವರ್ಷ ಅಧಮ.

ಮುಖ್ಯಕಾಲೇ ವ್ರತೋ ಭೂಯಾನ್ಮಧ್ಯಮೇ ಮಧ್ಯಮೋ ಭವೇತ್ ।
ನೀಚಾಬ್ದೇ ನೀಚತಾಂ ಯಾತಿ ಅಷ್ಟಮಾಬ್ದಂ ನ ಲಂಘಯೇತ್ ॥ 44 ॥

ಮುಖ್ಯಕಾಲದಲ್ಲಿ ಉಪನಯನವನ್ನು ಮಾಡುವುದು ಉತ್ತಮ. ಮಧ್ಯಮ ಕಾಲದಲ್ಲಿ ಮಧ್ಯಮ. ನೀಚಕಾಲದಲ್ಲಿ ನೀಚತ್ವ. ಆದ್ದರಿಂದ 8ನೆ ವರ್ಷ ಪ್ರಾಯವನ್ನು ಮೀರಬಾರದು.

ಗೌಣಕಾಲದ ಉತ್ತಮ ಮುಹೂರ್ತಕ್ಕಿಂತ ಮುಖ್ಯ ಕಾಲದ ಅಧಮ ಮುಹೂರ್ತ ಉತ್ತಮವೆಂದು ಮುಹೂರ್ತದರ್ಪಣ ವ್ಯಾಖ್ಯಾನಕಾರ ಹೇಳುತ್ತಾನೆ.

**ಅಧಮಕಾಲಜ ಮುಖ್ಯ ಮುಹೂರ್ತಾದಧಿಕಂ ಉತ್ತಮ ಕಾಲಜೋಽಧಮ ಮುಹೂರ್ತ ಏವ ಮುಖ್ಯಃ**

ಗೌಣಕಾಲವೆಂಬುದು ಬ್ರಾಹ್ಮಣರಿಗೆ 16 ವರ್ಷದ ವರೆಗೆ ಇರುತ್ತದೆ. 22 ವರ್ಷದ ವರೆಗೆ ಕ್ಷತ್ರಿಯರಿಗೆ, 24 ವರ್ಷದ ವರೆಗೆ ವೈಶ್ಯರಿಗೆ ಇರುತ್ತದೆ

## ॥ ಉಪನಯನಕಾಲದ ವಿಶೇಷ ದೋಷಗಳು ॥

**ನಷ್ಟೇ ಚಂದ್ರೇಽಸ್ತಗೇ(ಽಷ್ಟಮೇ) ಶುಕ್ರೇ ನಿರಂಶೇ ಚೈವ ಭಾಸ್ಕರೇ ।**
**ಕರ್ತವ್ಯಂ ನೋಪನಯನಂ ನಾನಧ್ಯಾಯೇ ಗಲಗ್ರಹೇ ॥ 45 ॥**

**ತಿಥೌ ಸೋಪಪದಾಖ್ಯಾಯಾಂ ಅನಧ್ಯಾಯೇ ಗಲಗ್ರಹೇ ।**
**ಅಪರಾಹ್ಣೇ ಚೋಪನೀತಃ ಪುನಃ ಸಂಸ್ಕಾರಮರ್ಹತಿ ॥ 46 ॥**

**ಪ್ರದೋಷದಿನೇ ಮಂದವಾರೇ ಕೃಷ್ಣಪಕ್ಷಾಂತ್ಯತ್ರಿಕೇ**
**ಚೋಪನಯನೇ ಪುನರುಪನಯನಮ್ ॥ 47 ॥**

ಕೃಷ್ಣಪಕ್ಷ, ಸಪ್ತಮಶುಕ್ರ, ಮೇಷಾದಿ ತಿಂಗಳ ಸುರುವಿನ ದಿನ ಉಪನಯನ ಮಾಡಬಾರದು. ಪ್ರದೋಷದಿನ, ಶನಿವಾರ, ಕೃಷ್ಣಪಕ್ಷದ ಕೊನೆಯ 5 ದಿನ, ಸೋಪಪದಾತಿಥಿ, ಅನಧ್ಯಾಯ, ಗಲಗ್ರಹ, ಅಪರಾಹ್ಣಗಳಲ್ಲಿ ಉಪನಯನವಾದರೆ ಪುನಸ್ಸಂಸ್ಕಾರವಾಗಬೇಕು ಈ ಎಲ್ಲ ದೋಷಗಳನ್ನು ಸಾಧ್ಯವಿದ್ದಷ್ಟು ಬಿಡಬೇಕು.

## ॥ ಅನಧ್ಯಾಯ ದಿನಗಳು ॥

**ಅನಧ್ಯಾಯಾಃ ಪೌರ್ಣಮಾಸೀ ಚತುರ್ದಶ್ಯಷ್ಟಮೀ ತಥಾ ।**
**ಪ್ರತಿಪತ್ ಸೂರ್ಯಸಂಕ್ರಾಂತಿರ್ಮನ್ವಾದ್ಯಾಶ್ಚ ಯುಗಾದಯಃ ॥ 48 ॥**

**ಪ್ರತಿಪಚ್ಚೇಷಘಟಿಕಾದಿ ಮಾತ್ರೇಽಪಿ ವ್ರತಬಂಧೇ ಅನಧ್ಯಾಯಃ ॥**
**ಅಷ್ಟಕಾಸು ಚ ಸರ್ವಾಸು ಯುಗಮನ್ವಂತರಾದಿಷು ।**
**ಅನಧ್ಯಾಯಂ ಪ್ರಕುರ್ವೀತ ತಥಾ ಸೋಪಪದಾಸ್ವಪಿ ॥ 49 ॥**

ಪೂರ್ಣಿಮಾ, ಚತುರ್ದಶೀ, ಅಷ್ಟಮೀ, ಪ್ರತಿಪತ್ ತಿಥಿಗಳು, ಸಂಕ್ರಾಂತಿ ಹಾಗೂ ಕೆಳಗೆ ತಿಳಿಸಿದ ಸೋಪಪದಾ, ಪ್ರದೋಷ, ಅಷ್ಟಕ, ಯುಗಾದಿ, ಮನ್ವಾದಿಗಳು ಅನಧ್ಯಾಯಗಳಾಗಿರುತ್ತವೆ. ಇವು ಉಪನಯನಕ್ಕೆ ವರ್ಜ್ಯ. ಪ್ರತಿಪತ್‌ತಿಥಿ ಅತ್ಯಂತ ಅಲ್ಪವಿದ್ದರೂ ಆ ದಿವಸವಿಡೀ ಅನಧ್ಯಾಯವಾಗಿರುತ್ತದೆ.

## ॥ ಸೋಪಪದಾ ತಿಥಿಗಳು ॥

ಸಿತಾ ಜ್ಯೇಷ್ಠೇ ದ್ವಿತೀಯಾ ಚ ಆಶ್ವಿನೇ ದಶಮೀ ಸಿತಾ ।
ಚತುರ್ಥೀ ದ್ವಾದಶೀ ಮಾಘೇ ಹ್ಯೇತಾಃ ಸೋಪಪದಾಃ ಸ್ಮೃತಾಃ ॥ 50 ॥

ಜ್ಯೇಷ್ಠ ಶುದ್ಧ ದ್ವಿತೀಯಾ, ಆಶ್ವಯುಜ ಶುದ್ಧ ದಶಮೀ, ಮಾಘದಲ್ಲಿ ಚತುರ್ಥೀ ದ್ವಾದಶಿಗಳು ಸೋಪಪದಾತಿಥಿಗಳು

## ॥ ಅಷ್ಟಕಗಳು ॥

ಹೇಮಂತ ಶಿಶಿರಯೋಶ್ಚತುರ್ಣಾಮಪರಪಕ್ಷಾಣಾಮಷ್ಟಮೀಷ್ವಷ್ಟಕಾಃ ॥ 51 ॥

ಹೇಮಂತಶಿಶಿರಋತುಗಳ ಕೃಷ್ಣಪಕ್ಷಗಳ ಅಷ್ಟಮಿಗಳಿಗೆ ಅಷ್ಟಕಗಳೆಂದು ಹೆಸರು.

## ॥ ಯುಗಾದಿಗಳು ॥

ಕಾರ್ತಿಕಶುಕ್ಲ ನವಮೀ ವೈಶಾಖ ಶುದ್ಧ ತೃತೀಯಕಾ ।
ಮಾಘಕೃಷ್ಣೇ ತ್ವಮಾವಾಸ್ಯಾ ಶ್ರಾವಣೇ ಚ ತಥಾ ತ್ವಮಾ ॥ 52 ॥

ಕಾರ್ತಿಕ ಶುಕ್ಲಪಕ್ಷ ನವಮೀ, ವೈಶಾಖ ಶುದ್ಧ ತೃತೀಯಾ, ಮಾಘ ಅಮಾವಾಸ್ಯಾ, ಶ್ರಾವಣ ಅಮಾವಾಸ್ಯಾ –ಇವು ಕೃತಾದಿ ಯುಗಾದಿಗಳು.

## ॥ ಪ್ರದೋಷ ॥

ರಾತ್ರೌ ಯಾಮದ್ವಯಾದರ್ವಾಕ್ ದೃಶ್ಯತೇ ಚೇತ್ತ್ರಯೋದಶೀ ।
ಪ್ರದೋಷ ಇತಿ ವಿಜ್ಞೇಯಃ ॥ 53 ॥

ಅರ್ಧರಾತ್ರಿಗೆ ಮುಂಚೆ ತ್ರಯೋದಶಿ ಇದ್ದರೆ ಆ ದಿನ ಪ್ರದೋಷವೆಂದು ತಿಳಿಯಬೇಕು.

## ॥ ಮನ್ವಂತರಾದಿಗಳು ॥

ಆಶ್ವಯುಕ್ ಶುಕ್ಲನವಮೀ ಕಾರ್ತಿಕೇ ದ್ವಾದಶೀ ತಥಾ ।
ತೃತೀಯಾ ಚೈತ್ರಮಾಸಸ್ಯ ತಥಾ ಭಾದ್ರಪದಸ್ಯ ಚ ॥ 54 ॥

ಫಾಲ್ಗುನಸ್ಯ ತ್ವಮಾವಾಸ್ಯಾ ಪುಷ್ಯಸ್ಯೈಕಾದಶೀ ಸಿತಾ ।
ಆಷಾಢಸ್ಯಾಪಿ ದಶಮೀ ಮಾಘಮಾಸಸ್ಯ ಸಪ್ತಮೀ ॥ 55 ॥

ಶ್ರಾವಣಸ್ಯಾಷ್ಟಮೀ ಕೃಷ್ಣಾ ತಥಾ ಮಾಘಸ್ಯ ಪೂರ್ಣಿಮಾ ॥ 56 ॥

ಕಾರ್ತಿಕೀ ಫಾಲ್ಗುನೀ ಚೈತ್ರೀ ಜ್ಯೇಷ್ಠೀ ಪಂಚದಶೀ ಸಿತಾ ।
ಮನ್ವಂತರಾದಯಶ್ಚೈತಾ ದತ್ತಸ್ಯಾಕ್ಷಯಕಾರಕಾಃ ॥ 57 ॥

ಆಶ್ವಯುಜ ಶುದ್ಧ ನವಮಿ, ಕಾರ್ತಿಕ ದ್ವಾದಶಿ, ಚೈತ್ರ ತೃತೀಯಾ, ಭಾದ್ರಪದ ತೃತೀಯಾ, ಫಾಲ್ಗುನ ಅಮಾವಾಸ್ಯಾ, ಪುಷ್ಯ ಏಕಾದಶೀ, ಆಷಾಢ ದಶಮೀ, ಮಾಘ ಸಪ್ತಮೀ, ಶ್ರಾವಣ ಕೃಷ್ಣಪಕ್ಷ ಅಷ್ಟಮೀ, ಮಾಘ ಪೂರ್ಣಿಮಾ, ಕಾರ್ತಿಕ–ಫಾಲ್ಗುನ–ಚೈತ್ರ–ಜ್ಯೇಷ್ಠಮಾಸಗಳ ಹುಣ್ಣಿಮೆಗಳು –ಈ 14 ಮನ್ವಂತರಾದಿಗಳು

## ॥ ಗಲಗ್ರಹ ॥

ಸಂಸ್ಕಾರಕೌಸ್ತುಭೆ–

ಪ್ರತಿಪತ್ಪೂರ್ವಚತುಷ್ಕಂ ನವಮೀಪೂರ್ವತ್ರಯಂ ಚತುರ್ಥೀ ಚ ।<br>
ಅಷ್ಟೌ ಗಲಗ್ರಹಾಸ್ತ್ಯಾಜ್ಯಾ ಗರ್ಗಸ್ಯ ಮತೇ ತಥಾ ಷಷ್ಠೀ ॥ 58 ॥

ತ್ರಯೋದಶೀ ಚತುಷ್ಕಂ ಚ ಸಪ್ತಮ್ಯಾದಿ ದಿನತ್ರಯಮ್ ।<br>
ಚತುರ್ಥ್ಯೇಕಾಕಿನೀ ಚೈವ ಅಷ್ಟಾವೇತೇ ಗಲಗ್ರಹಾಃ ॥ 59 ॥

ಚತುರ್ಥೀ, ಸಪ್ತಮಿ, ಅಷ್ಟಮಿ, ನವಮಿ ಮತ್ತು ತ್ರಯೋದಶೀ ಮೊದಲುಗೊಂಡು 4 ತಿಥಿಗಳು ಗಲಗಂಡ ದೋಷವನ್ನು ಹೊಂದಿರುತ್ತವೆ. ಷಷ್ಠಿಯನ್ನೂ ಬಿಡಬೇಕೆಂದು ಗರ್ಗರು ಹೇಳುತ್ತಾರೆ

## ॥ ಜ್ಯೇಷ್ಠಪುತ್ರನಿಗೆ ವಿಶೇಷ ॥

ಜ್ಯೇಷ್ಠಮಾಸೇ ವಿಶೇಷೇಣ ಸರ್ವಜ್ಯೇಷ್ಠಸ್ಯ ಚೈವ ಹಿ ।<br>
ಉಪನೀತಸ್ಯ ಪುತ್ರಸ್ಯ ಜಡತ್ವಂ ಮೃತ್ಯುರೇವ ವಾ ॥ 60 ॥

ಜ್ಯೇಷ್ಠಪುತ್ರನಿಗೆ ಜ್ಯೇಷ್ಠಮಾಸದಲ್ಲಿ ಉಪನಯನ ಮಾಡಬಾರದು.

ನ ಜನ್ಮಧಿಷ್ಣ್ಯೇ ನ ಚ ಜನ್ಮಮಾಸೇ<br>
ನ ಜನ್ಮಕಾಲೀನ ದಿನೇ ಚ ಕುರ್ಯಾತ್ ।<br>
ಜ್ಯೇಷ್ಠೇ ನ ಮಾಸಿ ಪ್ರಥಮಸ್ಯ ಸೂನೋಃ<br>
ತಥಾ ಸುತಾಯಾ ಅಪಿ ಮಂಗಲಾನಿ ॥ 61 ॥

ಜನ್ಮನಕ್ಷತ್ರ, ಜನ್ಮಮಾಸ, ಜನ್ಮದಿನ ಶುಭವಲ್ಲ. ಜ್ಯೇಷ್ಠಮಾಸದಲ್ಲಿ ಜ್ಯೇಷ್ಠ ಪುತ್ರ–ಪುತ್ರಿಯರ ಮಂಗಲಕಾರ್ಯ ಮಾಡಬಾರದು. ಜನ್ಮನಕ್ಷತ್ರಮಾಸಾದಿ ದೋಷಗಳು ಮೀನಚೈತ್ರದಲ್ಲಿ ದೋಷಕರವಲ್ಲ.

## ॥ ಮುಹೂರ್ತ ॥

ಜನ್ಮಾಬ್ದಾತ್ ಸಪ್ತಮಾದೌ ಸ್ಮೃತಮುಪನಯನಂ ಪಂಚಮೇ ಚಾನ್ನಭಂ ಸ–<br>
ನ್ನಾನಧ್ಯಾಯೋ ನಿಶಾರ್ಕಸ್ತಪಸಿ ಘಟಕುಜೌ ಚಾಷ್ಟಮೋ ಶುಕ್ರತೋಽನ್ಯೇ ।<br>
ತೇ ರಂಧ್ರೇ ಜನ್ಮಚಂದ್ರಾತ್ ಗುರುರಪಿ ಸಹಜೇ ಜನ್ಮಭಾಚಾರ್ಯರಂಧ್ರಂ<br>
ಕೃಷ್ಣಃ ಪಕ್ಷೋಽರ್ಕಜಾಸೃಗ್ದಿನಮಯನಮವಾಕ್ ಪಕ್ಷತಿರ್ಮಧ್ಯಮಾ ವಾ ॥ 62 ॥

ಜನ್ಮ ಸಪ್ತಮಾದಿ ಮುಖ್ಯ ಕಾಲದ ಪ್ರಾಯದಲ್ಲಿ ಉಪನಯನವನ್ನು ಮಾಡಬೇಕು. 5ನೆ ವರ್ಷದಲ್ಲಿಯೂ ಮಾಡಬಹುದು. ಅನ್ನಪ್ರಾಶನದ ನಕ್ಷತ್ರಗಳು ವಿಹಿತ. ಅನಧ್ಯಾಯ ವರ್ಜ್ಯ. ಅಪರಾಹ್ಣ, ರಾತ್ರಿಕಾಲ ತ್ಯಾಜ್ಯ. ನವಮದಲ್ಲಿ ರವಿಕುಜರಾಹುಗಳಿರಬಾರದು. ಅಷ್ಟಮದಲ್ಲಿ ಶುಕ್ರನಲ್ಲದೆ ಬೇರೆ ಯಾರೂ ಇರಬಾರದು. (ಶುಕ್ರನೂ ಮಧ್ಯಮವೇ) ಜನ್ಮಚಂದ್ರನಿಂದ ಅಷ್ಟಮದಲ್ಲಿ ಶುಕ್ರನಲ್ಲದೆ ಬೇರೆ ಯಾರೂ ಇರಬಾರದು. ಗುರುವು ತೃತೀಯದಲ್ಲಿರಬಾರದು. ಜನ್ಮರಾಶಿ ಯಲ್ಲಿಯೂ ಚತುರ್ಥ, ಷಷ್ಠ, ಅಷ್ಟಮ, ದಶಮ, ದ್ವಾದಶಗಳಲ್ಲಿಯೂ ಗುರುಸ್ಥಿತಿ ಶುಭವಲ್ಲ. ಮುಖ್ಯ ವಯಸ್ಸಿನಲ್ಲಿ ಗುರುಬಲವಿಲ್ಲದಿದ್ದರೆ ಶಾಂತಿಮಾಡಿ ಉಪನಯನ ಮಾಡಬಹುದು. ಜನ್ಮನಕ್ಷತ್ರವನ್ನೂ ಆಚಾರ್ಯನ ಜನ್ಮಾಷ್ಟಮರಾಶಿಯನ್ನೂ ಬಿಡಬೇಕು. ಕೃಷ್ಣಪಕ್ಷವನ್ನು ಬಿಡಬೇಕು. ಧರ್ಮಶಾಸ್ತ್ರದ ವಚನವಿರುವುದರಿಂದ ವಂಸತಋತುವಿನ 2 ತಿಂಗಳಿನಲ್ಲಿ ಕೃಷ್ಣಪಕ್ಷ ಪಂಚಮಿ ವರೆಗಿನ ದಿನಗಳು ಆಗಬಹುದು. ಕುಜ ಶನಿವಾರಗಳು ವರ್ಜ್ಯ. ದಕ್ಷಿಣಾಯನ ವರ್ಜ್ಯ. ಪಾಡ್ಯವನ್ನು ಮಧ್ಯಮವೆಂದು ಇಲ್ಲಿ ಹೇಳಿದರೂ ಅದು ಪುನರುಪನಯನ ವಿಷಯವಾದ್ದರಿಂದ ನಿತ್ಯೋಪನಯನಕ್ಕೆ ಅದನ್ನು ಬಿಡಬೇಕು. 'ವಿಪದ್ಯಪ್ಯುಪಧಾಯನಂ' ಎಂಬ ವಚನದಂತೆ ವಿಪತ್ತಾರೆಯು ಉಪನಯನಕ್ಕೆ ಮಧ್ಯಮವಾಗಿ ಗ್ರಾಹ್ಯ.

## ।। ಉಪಾಕರ್ಮ ।।

**ಆಷಾಢ್ಯಾಂ ಪೌರ್ಣಮಾಸ್ಯಾಂ ಖಲು ಕತಿಚಿದುಪಾಕರ್ಮ ಕುರ್ವಂತ್ಯಥಾಽನ್ಯೇ**
**ಶ್ರಾವಣ್ಯಾಂ ಸಾಚ್ಯುತಾಯಾಮಪರ ಇಹ ತಥಾ ಭಾದ್ರಪದ್ಯಾಂ ನಭಸ್ಯೇ ।**
**ತದ್ದಸ್ತೇ ತದ್ವಿಯೋಗೇ ಸತಿ ಪುನರಪರೇ ಶ್ರಾವಣೇ ಹಸ್ತವತ್ಯಾಂ**
**ಪಂಚಮ್ಯಾಮೋಷಧೀನಾಂ ಮುರಜಿತಿ ಪರಿಪಾ**
**ಕೇಽಪಿ ಮಾಸೋಽಮಲಃ ಸ್ಯಾತ್ ।। 63 ।।**

ಉಪಾಕರ್ಮವೆಂದರೆ ವೇದದ ಪ್ರಾರಂಭ.

ಯಜುರ್ವೇದಿಗಳು ಆಷಾಢ ಹುಣ್ಣಿಮೆಯ ದಿವಸ ಉಪಾಕರ್ಮ ಮಾಡುತ್ತಾರೆ. ಅದು ಹುಣ್ಣಿಮೆ ತಿಥಿ ಇರುವಾಗಲೇ ಮಾಡಬೇಕು. ಆಷಾಢದಲ್ಲಿ ಸಾಧ್ಯವಾಗದಿದ್ದರೆ ಶ್ರಾವಣಮಾಸದ ಹುಣ್ಣಿಮೆಯಲ್ಲಿ ಮಾಡಬೇಕು. ವಿಷ್ಟಿಯು ಇದಕ್ಕೆ ವರ್ಜ್ಯವಲ್ಲ. ಕೌಷೀತಕರು ಶ್ರಾವಣದ ಹುಣ್ಣಿಮೆಯಲ್ಲಿ ಮಾಡುತ್ತಾರೆ. ಭಾದ್ರಪದ ಹುಣ್ಣಿಮೆಯಲ್ಲಿಯೂ ಮಾಡಬಹುದು. ಸಾಮವೇದಿಗಳು ಅಲ್ಲಿ ಶ್ರವಣ, ಪೂರ್ವಾ ಭಾದ್ರೆ ಸಿಗದಿದ್ದರೆ ಶ್ರಾವಣ ಭಾದ್ರಪದ ಮಾಸಗಳ ಹಸ್ತಾನಕ್ಷತ್ರದ ದಿವಸ ಉಪಾಕರ್ಮ ಮಾಡುತ್ತಾರೆ. ಕೆಲವರು ಶ್ರಾವಣಮಾಸದಲ್ಲಿ ಹಸ್ತಾನಕ್ಷತ್ರಯುಕ್ತ ಪಂಚಮಿಯಲ್ಲಿ ಮಾಡುತ್ತಾರೆ. ಆಶ್ವಲಾಯನರು ಸಿಂಹಮಾಸದ ಶ್ರವಣನಕ್ಷತ್ರದಲ್ಲಿ ಮಾಡುತ್ತಾರೆ. ಅಧಿಕಮಾಸ ವರ್ಜ್ಯ.

## ॥ ವೇದಾರಂಭ ॥

ವೇದಾರಂಭೋಽಥ ಮಾಘಾರ್ಧಾತ್ ಪೂರ್ವಮೇವಾಕ್ಷರೋದಿತೇ ।
ಕಾಲೇ ಜ್ಯೇಷ್ಠಾ ಶುಭಾ ಪಕ್ಷತ್ಯಂತ್ಯಪಾದೋಽಪಿ ಮಧ್ಯಮಃ ॥ 64 ॥

ಉಪಾಕರ್ಮದ 4ನೇ ದಿನದಿಂದ ಮಾಘಮಾಸದ ಹುಣ್ಣಿಮೆಯ ವರೆಗೆ ವೇದಾರಂಭದ ಕಾಲ ಆದು ಎಲ್ಲ ಶಾಖೆಯವರಿಗೂ ಅವರವರ ಉತ್ಸರ್ಗದಿನಕ್ಕಿಂತ ಮೊದಲಾಗಬೇಕು ಅಕ್ಷರಾರಂಭಕ್ಕೆ ಹೇಳಿದ ಕಾಲ ವಿಹಿತ. ವೇದಾರಂಭಕ್ಕೆ ಜ್ಯೇಷ್ಠಾನಕ್ಷತ್ರ ಶುಭ ಮಧ್ಯಮವಾಗಿ ಪಾಡ್ಯದ ಕೊನೆಯ ಪಾದವೂ ಆಗಬಹುದು

## ॥ ಸಮಾವರ್ತನೆ ॥

ಸ್ನಾನೇ ಪ್ರಾಯೇಣ ಸರ್ವೇಷಾಂ ಚೌಲವತ್ ಸಮಯಃ ಸ್ಮೃತಃ ॥ 65 ॥

ಚೌಲದ ಮುಹೂರ್ತವೇ ಸಮಾವರ್ತನೆಗೂ ಆಗುತ್ತದೆ.

## ॥ ವಿವಾಹಮುಹೂರ್ತ ॥

ರೋಹಿಣ್ಯುತ್ತರರೇವತೀ ಮೃಗಶಿರೋ ಮೂಲಾನುರಾಧಾ ಮಘಾ-
ಹಸ್ತ ಸ್ವಾತಿಷು ಷಷ್ಠತೌಲಿಮಿಥುನೇಷೂದ್ಯತ್ಸು ಪಾಣಿಗ್ರಹಃ ।
ಸಪ್ತಾಷ್ಟಾಂತ್ಯಬಹಿಃ ಶುಭೈರುಡುಪತಾವೇಕಾದಶದ್ವಿತ್ರಿಗೇ
ಕ್ರೂರೈಸ್ತ್ರ್ಯಾಯಷಡಷ್ಟಗೈರ್ನ ತು ಭೃಗೌ ಷಷ್ಠೇ ಕುಜೇ ಚಾಷ್ಟಮೇ ॥ 66 ॥

ಬೃಹತ್ ಸಂಹಿತೆ -ಅ. 96

ರೋಹಿಣೀ, ಮೃಗಶಿರೆ, ಮಘೆ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ, ಹಸ್ತ, ಸ್ವಾತೀ, ಅನುರಾಧಾ, ಮೂಲಾ, ರೇವತಿ -ಇವು ಶುಭನಕ್ಷತ್ರಗಳು ಕನ್ಯಾ, ತುಲಾ, ಮಿಥುನ ರಾಶಿಗಳು ಉತ್ತಮ. ಸಪ್ತಮ-ಅಷ್ಟಮ- ದ್ವಾದಶಗಳಲ್ಲಿ ಶುಭ ಗ್ರಹಗಳು ಪ್ರಶಸ್ತವಲ್ಲ ಚಂದ್ರನು 2, 3, 11ನೆ ರಾಶಿಗಳಲ್ಲಿದ್ದರೆ ಬಹು ಉತ್ತಮ ಷಷ್ಠದ ಶುಕ್ರ, ಅಷ್ಟಮದ ಕುಜಸ್ಥಿತಿ ಸಂಪೂರ್ಣ ವರ್ಜ್ಯ. 3, 6, 11ರಲ್ಲಿ ಪಾಪ ಗ್ರಹಗಳ ಸ್ಥಿತಿ ಪ್ರಶಸ್ತ

ಕೇಚಿದ್ಬುಧಾಃ ಶುಭಂ ಪ್ರಾಹುಃ ಕೃಷ್ಣಪಕ್ಷಾಷ್ಟಮೀಮಿಹ ।
ಕರಗ್ರಹೇ ಪೌರ್ಣಮಾಸೀ ಮಧ್ಯೋಕ್ತಾ ಪೂರ್ವಸೂರಿಭಿಃ ॥ 67 ॥

ಕನ್ಯಾತುಲಾನ್ತ್ಯಮಿಥುನಾನ್ಯತಿಪೂಜಿತಾನಿ
ಮಧ್ಯಾಃ ಕುಲೀರಝುಷಚಾಪಧರಾ ವಿವಾಹೇ ।
ತೇಽಪ್ಯುತ್ತಮಾಃ ಶುಭಯುತಾಃ ಸಗುರುಂ ಚ ಸಿಂಹಂ
ಕುಂಭಂ ಮೃಗಂ ಚ ಸಸಿತಂ ಶುಭಮಾಹುರನ್ಯೇ ॥ 68 ॥

ಅತೀವ ವರ್ಜಿತೋ ಮೇಷೋ ವೃಶ್ಚಿಕೋಽಪ್ಯತ್ರ ನಿಂದ್ಯತೇ ॥ 69 ॥

ಲಗ್ನೇ ಚಂದ್ರೋ ಮರಣದೋ ರಾಹ್ವಾರೌ ರಂಧ್ರಗೌ ತಥಾ ।
ಸಪ್ತಮೇಽತ್ರ ಗ್ರಹಾನ್ ಸರ್ವಾನ್ ನಿಯಮೇನ ವಿವರ್ಜಯೇತ್ ॥ 70 ॥

ವಿವಾಹೇ ಕರ್ಕಿಕಲಶಚಾಪಕನ್ಯಾಗತೋ ರವಿಃ ।
ಮೀನಾಂತ್ಯಾರ್ಧಗತಶ್ಚಾಪಿ ವರ್ಜ್ಯತೇ ಸರ್ವಥಾ ದ್ವಿಜೈಃ ॥ 71 ॥

ಕೃಷ್ಣಪಕ್ಷ ಅಷ್ಟಮಿ ಶುಭವೆಂದು ಕೆಲವರು ಹೇಳುತ್ತಾರೆ ಪೌರ್ಣಮಾಸಿ ಮಧ್ಯಮ. ಕನ್ಯಾ, ತುಲಾ, ಮಿಥುನಗಳು ಅತ್ಯಂತ ಶುಭಲಗ್ನಗಳು. ಕರ್ಕಾಟಕ, ಧನು, ಮೀನಗಳು ಮಧ್ಯಮ. ಸಿಂಹಗುರು ಮಧ್ಯಮ. ಮಕರ ಕುಂಭಗಳಲ್ಲಿ ಶುಕ್ರೋದಯವಿದ್ದರೆ ಶುಭ ಶುಕ್ರಕ್ಷೇತ್ರವಾದ್ದರಿಂದ ವೃಷಭವೂ ಶುಭ. ಮೇಷ ವೃಶ್ಚಿಕ ನಿಂದ್ಯ. ಲಗ್ನದಲ್ಲಿ ಚಂದ್ರ ಮೃತ್ಯುಪ್ರದ. ಅಷ್ಟಮದಲ್ಲಿ ಕುಜರಾಹುಗಳು ವರ್ಜ್ಯ. ಸಪ್ತಮ ಶುದ್ಧಿ ಇರಬೇಕು. ಕರ್ಕಾಟಕ, ಕನ್ಯಾ, ಧನು, ಕುಂಭಮಾಸ ಮೀನದ ಕೊನೆಯ 15 ದಿವಸಗಳು ವಿವಾಹಕ್ಕೆ ವರ್ಜ್ಯ. 'ವರ್ಜ್ಯಂ ಜನ್ಮ ವರಸ್ಯಾದ್ಯಂ' ಎಂಬ ಪ್ರಮಾಣಾನುಸಾರ ವರನ ಜನ್ಮನಕ್ಷತ್ರ ತ್ಯಾಜ್ಯ. 'ವಿವಾಹೇ ಪ್ರತ್ಯರೋ ಗ್ರಾಹ್ಯಃ' ಎಂಬ ವಚನವಿರುವುದರಿಂದ ವಿವಾಹಕ್ಕೆ ಮಧ್ಯಮವಾಗಿ ಪ್ರತ್ಯರೆ ಗ್ರಾಹ್ಯ.

## ॥ ದೇವಪ್ರತಿಷ್ಠೆ ॥

ಪಕ್ಷೇಽಚ್ಛೇಽಯನ ಉತ್ತರೇಽನ್ನಭಮಘಾಸ್ವಿಷ್ಟಾಃ ಪ್ರತಿಷ್ಠಾದಯೋ
ವರ್ಜ್ಯಾ ವಾರುಣಸೌರ್ಯಸೃಗ್ದಿನಧನುರ್ಮೇಷೈಣಜೂಕಾ ಇಹ ।
ಧೀಸ್ಥಾ ರಂಧ್ರಶುಭಾಂತ್ಯಗಾ ಅಪಿ ಖರಾಃ ಪೂರ್ವೌ ನಿಶಾತ್ರ್ಯಂಶಕೌ
ವಿದ್ಧರ್ಕ್ಷಂ ಚ ಮತೋಽಷ್ಟಬಂಧ ಉಭಯೋಃ ಪಕ್ಷಾಯನ ದ್ವಂದ್ವಯೋಃ ॥
॥ 72 ॥

ಶುಕ್ಲಪಕ್ಷದಲ್ಲಿ ಉತ್ತರಾಯಣದಲ್ಲಿ ಮಘಾನಕ್ಷತ್ರ ಮತ್ತು ಅನ್ನಪ್ರಾಶನಕ್ಕೆ ಹೇಳಿದ ನಕ್ಷತ್ರಗಳಲ್ಲಿ ಪ್ರತಿಷ್ಠಾದಿಗಳನ್ನು ಮಾಡಬಹುದು. ಶತಭಿಷೆಯಲ್ಲಿ ಮಾಡಬಾರದು. ಕುಜವಾರ, ಶನಿವಾರಗಳು ವರ್ಜ್ಯ. ಮೇಷ, ತುಲಾ, ಧನು, ಮಕರ ರಾಶಿಗಳು ವರ್ಜ್ಯ. ಪಂಚಮ, ಅಷ್ಟಮ, ನವಮ, ದ್ವಾದಶಗಳಲ್ಲಿ ಪಾಪಗ್ರಹರಿರಬಾರದು. ರಾತ್ರಿಯ 3 ಭಾಗಗಳಲ್ಲಿ ಮೊದಲ 2 ಭಾಗಗಳನ್ನು ಬಿಡಬೇಕು. ವೇಧ(ಮುಂದೆ ತಿಳಿಸಿದೆ)ವನ್ನು ಬಿಡಬೇಕು. 2 ಪಕ್ಷಗಳಲ್ಲಿಯೂ 2 ಅಯನಗಳಲ್ಲಿಯೂ ಅಷ್ಟಬಂಧವನ್ನು ಮಾಡಬಹುದು.

## ॥ ವೇಧ ॥

ಅಶ್ವಿನೀಮಘಮೂಲಾಹಿರೇವತೀಶಕ್ರತಾರಕಾಃ ।
ವಿಶ್ವಾನಲೈಕಪಾಚ್ಛೂರ್ಪಭಾಗ್ಯರ್ಕ್ಷಾದಿತಯಸ್ತಥಾ ॥ 73 ॥

ಯಾಮ್ಯಪುಷ್ಯಾರ್ಯಮಾಷಾಢಬುಧ್ನ್ಯಮೈತ್ರಾಖ್ಯತಾರಕಾಃ ।
ರೋಹಿಣೀಶತತಾರಾರ್ಕಹರಿಸ್ವಾತಿಹರಾ ಅಪಿ ॥ 74 ॥

ತ್ರಯಶ್ಚಿತ್ರೇಂದುವಸವೋ ವೇಧವರ್ಗಾಃ ಪ್ರಕೀರ್ತಿತಾಃ ॥ 75 ॥
ತತ್ರ ಸೂರ್ಯಕುಜಯುಕ್ತೋ ವರ್ಗಃ ತ್ಯಾಜ್ಯಃ ।
ಜೀವಯುತವರ್ಗೇ ಜೀವಸ್ಥಿತತಾರಂ ಗ್ರಾಹ್ಯಂ । ಶೇಷಾ ವರ್ಜ್ಯಾಃ ॥
ರಾಹುಯುತ ವರ್ಗೇ ರಾಹುಸ್ಥಿತತಾರಂ ವರ್ಜನೀಯಂ । ಶೇಷಾ ಗ್ರಾಹ್ಯಾಃ ॥
॥ 76 ॥

ಅಶ್ವಿನೀ, ಮಖೆ, ಮೂಲಾ, ಆಶ್ಲೇಷಾ, ಜ್ಯೇಷ್ಠಾ, ರೇವತೀಗಳು – 1 ವರ್ಗ.

ಕೃತ್ತಿಕಾ, ಉತ್ತರಾ, ಉತ್ತರಾಷಾಢಾ, ಪುನರ್ವಸು, ವಿಶಾಖಾ, ಪೂರ್ವಾಭಾದ್ರಾ – 1 ವರ್ಗ.

ಭರಣೀ, ಹುಬ್ಬಾ, ಪೂರ್ವಾಷಾಢಾ, ಪುಷ್ಯ, ಅನುರಾಧಾ, ಉತ್ತರಾಭಾದ್ರಾ – 1 ವರ್ಗ.

ರೋಹಿಣೀ, ಹಸ್ತ, ಶ್ರವಣ, ಆರ್ದ್ರೆ, ಸ್ವಾತಿ, ಶತಭಿಷೆ – 1 ವರ್ಗ.

ಮೃಗಶಿರೆ, ಚಿತ್ರೆ, ಧನಿಷ್ಠೆಗಳು – 1 ವರ್ಗ.

ಇವುಗಳಲ್ಲಿ ಸೂರ್ಯಕುಜರಿದ್ದ ವರ್ಗ ಸಂಪೂರ್ಣ ತ್ಯಾಜ್ಯ. ಗುರು ಇದ್ದ ನಕ್ಷತ್ರವಾಗಬಹುದು. ಇತರ ನಕ್ಷತ್ರಗಳು ತ್ಯಾಜ್ಯ. ರಾಹುವಿರುವ ವರ್ಗದಲ್ಲಿ ರಾಹುಯುಕ್ತ ನಕ್ಷತ್ರ ತ್ಯಾಜ್ಯ. ಇತರ ನಕ್ಷತ್ರಗಳು ಗ್ರಾಹ್ಯ.

ಮಾತೃಭೈರವವಾರಾಹನಾರಸಿಂಹತ್ರಿವಿಕ್ರಮಾಃ ।
ಮಹಿಷಮರ್ದಿನಿಕಾ ಚೈವ ಸ್ಥಾಪ್ಯಾ ವೈ ದಕ್ಷಿಣಾಯನೇ ॥ 77 ॥

ಮಾತೃಗಣಗಳು (ಬ್ರಾಹ್ಮ್ಯಾದಿ ಚಾಮುಂಡಾ ಪರ್ಯಂತ); ಭೈರವಾದಿಗಳು (ರುದ್ರದೇವರ ವೀರಭದ್ರಾದಿ ರೂಪಗಳು); ವರಾಹ, ನರಸಿಂಹ, ತ್ರಿವಿಕ್ರಮ, ಮಹಿಷಮರ್ದಿನಿ ಮುಂತಾದ ಉಗ್ರರೂಪದ ದೇವತೆಗಳನ್ನು ದಕ್ಷಿಣಾಯನದಲ್ಲಿ ಪ್ರತಿಷ್ಠಾಪಿಸಬೇಕೆಂದು ವೈಖಾನಸ ಸಂಹಿತೆಯಲ್ಲಿ ತಿಳಿಸಿದೆ.

## ॥ ಗೃಹಾರಂಭ ॥

ಸ್ಥಿರರಾಶಿಗತೇ ಸೂರ್ಯೇ ಗೃಹಕರ್ಮ ಸುಶೋಭನಂ ।
ಚರೇ ತು ಮಧ್ಯಮಂ ವಿದ್ಯಾದ್ದ್ವಿಸ್ವಭಾವೇ ತು ನಿಂದಿತಮ್ ॥ 78 ॥

ಸೂರ್ಯನು ಸ್ಥಿರರಾಶಿಯಲ್ಲಿರುವಾಗ ಗೃಹಾರಂಭ ಪ್ರಶಸ್ತ. ಕರ್ಕಾಟಕವನ್ನು ಬಿಟ್ಟು ಚರರಾಶಿಯ ಮಾಸಗಳು ಮಧ್ಯ. ಕರ್ಕಾಟಕ ವರ್ಜ್ಯವೆಂದು ಮುಹೂರ್ತ ಪದವೀಕರ ಹೇಳುತ್ತಾನೆ. ಉಭಯರಾಶಿಗಳನ್ನು ಬಿಡಬೇಕು.

ಗುರುಭಾರ್ಗವಯೋರ್ಮೌಢ್ಯೇ ಬಾಲ್ಯವಾರ್ಧಕಯೋರಪಿ ।
ಚಾತುರ್ಮಾಸ್ಯೇ ಶೂನ್ಯಮಾಸೇ ಗೃಹಕರ್ಮ ನ ಕಾರಯೇತ್ ॥ 79 ॥

ಗುರುಶುಕ್ರರ ಮೌಢ್ಯ, ಬಾಲ್ಯ, ವಾರ್ಧಕ್ಯಗಳು, ಚಾತುರ್ಮಾಸ್ಯ ಧನು ಪುಷ್ಯಗಳನ್ನು ಬಿಡಬೇಕು.

ಖಳಂ ಚೋಲೂಖಲಗೃಹಂ ಪಾಕಾಗಾರಂ ಚ ಗೋಗೃಹಂ ।
ಸುಧೀಃ ಕರೋತು ಮಾರ್ತಾಂಡೇ ಮಿಥುನಾದ್ಯುಭಯರ್ಕ್ಷಗೇ ॥ 80 ॥

ಮಿಥುನದಲ್ಲಿ ಸೂರ್ಯನಿರುವಾಗ ಧಾನ್ಯಾಗಾರ, ಕನ್ಯಾರಾಶಿಯಲ್ಲಿ ಸೂರ್ಯ ನಿರುವಾಗ ಭತ್ತ ಕುಟ್ಟುವ ಕೋಣೆ, (ಹಿಟ್ಟಿನ ಗಿರಣಿ ಇತ್ಯಾದಿ) ಧನುವಿನಲ್ಲಿ ಸೂರ್ಯನಿರುವಾಗ ಅಡುಗೆಮನೆ, ಮೀನದಲ್ಲಿ (ರೇವತೀನಕ್ಷತ್ರ ಬಿಟ್ಟು) ಸೂರ್ಯ ನಿರುವಾಗ ದನದ ಕೊಟ್ಟಿಗೆಯನ್ನು ಕಟ್ಟಬೇಕು.

ಸಿಂಹವ್ಯಾಘ್ರೇ ತು ತಿಥ್ಯರ್ಧೇ ವರ್ಜಯೇತ್ ಪಶುವೇಶ್ಮನಿ ।
ಚತುರ್ಥಗಾ ಗ್ರಹಾ ನೇಷ್ಟಾಃ ವರ್ಜ್ಯಾಃ ಪಾಪಾ ವಿಶೇಷತಃ ॥ 81 ॥

ರಂಧ್ರೇ ಮೃತಿಪ್ರದೋ ಭೌಮಃ ಲಗ್ನೇ ನೇಷ್ಟೋ ದಿವಾಕರಃ ॥ 82 ॥

ಗೋಗೃಹಾರಂಭಕ್ಕೆ ಸಿಂಹವ್ಯಾಘ್ರ ಕರಣಗಳು ತ್ಯಾಜ್ಯ. ಚತುರ್ಥದಲ್ಲಿ ಗ್ರಹಗಳು ಪ್ರಶಸ್ತವಲ್ಲ. ಪಾಪಗ್ರಹಗಳು ಖಂಡಿತ ಇರಬಾರದು. ಅಷ್ಟಮದ ಕುಜನನ್ನೂ, ಲಗ್ನದ ಸೂರ್ಯನನ್ನೂ ಬಿಡಬೇಕು

## ॥ ಗೃಹಪ್ರವೇಶ ॥

ಗೃಹಪ್ರವೇಶೇ ಕೂಪೇ ಚ ಪ್ರಾಯೇಣಾರಂಭವದ್ವಿಧಿಃ ।
ಗೃಹಪ್ರವೇಶೇ ವರ್ಜ್ಯಃ ಸ್ಯಾತ್ ಘಟಸ್ತ್ರೀಕರ್ಕಿಗೋರವಿಃ ॥ 83 ॥

ಶಸ್ತಾಃ ಸ್ಥಿರಾಶ್ಚ ಮೃದವಶ್ಚ ಗೃಹಪ್ರವೇಶೇ
ಕ್ಷಿಪ್ರಾಶ್ಚರಾಶ್ಚ ವಿದಧತ್ಯುಡವಃ ಪ್ರವಾಸಂ ।
ಕೇಂದ್ರಾಷ್ಟಮೇಷು ರಹಿತೇಷ್ವಶುಭೈರ್ವ್ಯಯೇ ಚ
ಶುದ್ಧೇ ಗುರೌ ವಪುಷಿ ದೈತ್ಯಗುರೌ ಚ ಚಂದ್ರೇ ॥ 84 ॥

ಪಾಪೇಷು ವೈರಿಸಹಜಾಗಮಸಂಸ್ಥಿತೇಷು
ನವ್ಯಂ ಗೃಹಂ ಪ್ರವಿಶತಾದ್ವೃಷಕುಂಭಲಗ್ನೇ ॥ 85 ॥

ಸಾಮಾನ್ಯವಾಗಿ ಗೃಹಾರಂಭದಂತೆಯೇ ಗೃಹಪ್ರವೇಶ ಮುಹೂರ್ತವೆಂದು ತಿಳಿಯಬೇಕು. ಕರ್ಕಾಟಕ, ಕನ್ಯಾ, ಕುಂಭಮಾಸಗಳು ವರ್ಜ್ಯ. ಸ್ಥಿರಮೃದು ನಕ್ಷತ್ರಗಳು ಪ್ರಶಸ್ತ. ಕ್ಷಿಪ್ರ ಚರ ನಕ್ಷತ್ರಗಳು ಅಶುಭ. ಅಷ್ಟಮಕೇಂದ್ರಗಳಲ್ಲಿ ಪಾಪರಿರಬಾರದು. ವ್ಯಯಭಾವ ಶುದ್ಧವಿರಬೇಕು. ಚಂದ್ರಗುರುಶುಕ್ರರು ಲಗ್ನದಲ್ಲಿರುವುದು ಉತ್ತಮ ಪಾಪಗ್ರಹಗಳು 3, 6, 11ರಲ್ಲಿರುವುದು ಪ್ರಶಸ್ತ. ವೃಷಭ, ಕುಂಭ ಲಗ್ನಗಳಲ್ಲಿ ಗೃಹಪ್ರವೇಶ ಅತ್ಯುತ್ತಮ.

## ॥ ಕೂಪಾರಂಭ ॥

ಚಾಪ್ಯೋ ವಿವರ್ಜ್ಯಃ ಕೂಪಾದೌ ನ ವರ್ಜ್ಯಾಶ್ಚರರಾಶಯಃ ।
ಸೌರಮಾಸಾಃ ಶುಭಾಃ ಸರ್ವೇ ವಿಪಾಪಾ ರಾಶಯಃ ಶುಭಾಃ ॥ 86 ॥

ಚಿತ್ರಾದ್ವೀಂದ್ವಶ್ವಿನೀಮೂಲಹೀನಾಸ್ತಾರಾ ಗೃಹೋದಿತಾಃ ।
ಶುಭಾಃ ಕೂಪಾದಿಖನನೇ ಜಲರ್ಕ್ಷಂ ಸಿತ ದೃಕ್ ಶುಭಾಃ ॥ 87 ॥

ಕೂಪಾರಂಭಕ್ಕೆ ಚರರಾಶಿಗಳು ಉತ್ತಮ ಧನುರ್ಲಗ್ನ ವರ್ಜ್ಯ. ಮಾಸಗಳೆಲ್ಲವೂ ಆಗಬಹುದು. ಲಗ್ನದಲ್ಲಿ ಪಾಪಗ್ರಹಗಳಿರಬಾರದು. ಸ್ಥಿರಮೃದು ನಕ್ಷತ್ರಗಳು ಪ್ರಶಸ್ತ. ಆದರೆ ಚಿತ್ರೆ, ಸ್ವಾತಿ, ಮೃಗಶಿರೆ, ಅಶ್ವಿನೀ ಮೂಲಗಳು ವರ್ಜ್ಯ. ಜಲರಾಶಿ, ಶುಕ್ರ ದೃಷ್ಟಿಗಳು ಉತ್ತಮ.

(ಪ್ರತ್ಯೇಕ ಹೇಳದಿದ್ದರೆ ಶುಕ್ರದೃಷ್ಟಿ ಎಲ್ಲದಕ್ಕೂ ಅಶುಭವೆಂದು ತಿಳಿಯಬೇಕು)

## ॥ ತರುಚ್ಛೇದನ ॥

ಸ್ವಾತೀ ಪಂಚಯಮಶ್ರೋಣಾದಸ್ರವಾರುಣತಾರಕಾಃ ।
ದೇವಾಲಯಗೃಹಾದೀನಾಂ ತರುಚ್ಛೇದೇ ವಿವರ್ಜಯೇತ್ ॥ 88 ॥

ಸ್ವಾತೀಯಿಂದ 5 ನಕ್ಷತ್ರಗಳು, ಭರಣಿ ಅಶ್ವಿನೀ ಶ್ರವಣಾ ಶತಭಿಷೆಗಳು ವೃಕ್ಷಚ್ಛೇದನಕ್ಕೆ ವರ್ಜ್ಯ. ಮರಗಳ ಕೆಲಸಕ್ಕೆ ಪಾಷಾಣಭೇದನಾದಿಗಳಿಗೆ, ಇಟ್ಟಿಗೆ ಸುಡಲಿಕ್ಕೆ ಇದೇ ರೀತಿ ಮುಹೂರ್ತ.

ಪ್ರತ್ಯೇಕವಾಗಿ ಹೇಳದಿರುವ ಕಡೆ ನಿತ್ಯದೋಷಾದಿಗಳನ್ನು ಬಿಟ್ಟು ಒಳ್ಳೆಯ ಲಗ್ನಾದಿಗಳನ್ನು ಆರಿಸಬೇಕು.

## ॥ ಹೊಸ ಬಟ್ಟೆ ಉಡಲು ಮುಹೂರ್ತ ॥

ದ್ವಿಡ್ವ್ಯಯೇಂದುವಸುದಸ್ರರೇವತೀಹಸ್ತಪಂಚಸುರಸೂದ್ವ್ಯಜೋತ್ತರಾಃ ।
ಶುಕ್ರದೃಕ್ ಚ ವಸನೇ ಸುಶೋಭನಾ ನ ಸ್ತ್ರ್ಯಜಾಳಿಧನುರುಗ್ರವಾಸರಾಃ ॥ 89 ॥

ಚಂದ್ರನು ಇಷ್ಟಸ್ಥಾನದಲ್ಲಿರಬೇಕು. ಷಷ್ಠ, ದ್ವಾದಶ ಮಧ್ಯಮ. ಅಶ್ವಿನೀ, ರೋಹಿಣೀ, ಪುನರ್ವಸು, ಪುಷ್ಯ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ, ಹಸ್ತ, ಚಿತ್ರಾ, ಸ್ವಾತೀ, ವಿಶಾಖಾ, ಅನುರಾಧಾ, ಧನಿಷ್ಠಾ, ರೇವತೀ –ಈ ನಕ್ಷತ್ರಗಳು ಶುಭ. ಶುಕ್ರದೃಷ್ಟಿ ಪ್ರಶಸ್ತ. ಮೇಷ, ಕನ್ಯಾ, ವೃಶ್ಚಿಕ, ಧನು ವರ್ಜ್ಯ. ರವಿ, ಕುಜ, ಶನಿವಾರಗಳು ವರ್ಜ್ಯ

## ॥ ಆಭರಣ ಮಾಡಿಸಲು ಮತ್ತು ಧರಿಸಲು ಮುಹೂರ್ತ ॥

ವಿಬುಧಗುರೌ ಲಗ್ನಗತೇ ಸ್ವಾಂಶಸ್ಥೇ ಕಂಟಕೇ ಚ ಬುಧಸಿತಯೋಃ ।
ನವ್ಯಂ ಕನಕಾಭರಣಂ ಶುಭಾಂಶಕೇ ರೋಹಿಣೀಂದುಲಗ್ನೇ ವಾ ॥ 90 ॥

ಬುಧಗುರುಶುಕ್ರರು ಕೇಂದ್ರದಲ್ಲಿದ್ದು ಸ್ವಕ್ಷೇತ್ರ ಸ್ವಾಂಶಗಳಲ್ಲಿ ಗುರುವಿರಬೇಕು ರೋಹಿಣ್ಯಾದಿ ಶುಭನಕ್ಷತ್ರ ಶುಭಾಂಶಗಳಲ್ಲಿ ಚಂದ್ರ ಮತ್ತು ಲಗ್ನವಿರುವಾಗ ಹೊಸ ಚಿನ್ನ ಮಾಡಿಸುವುದು ಮತ್ತು ಧರಿಸುವುದು ಶುಭ

## ॥ ಯಾತ್ರಾ ಪ್ರಕರಣ ॥

ಮೃಗಾಶ್ವಿನೀ ಪುಷ್ಯ ಪುನರ್ವಸೂ ಚ ಹಸ್ತಾನುರಾಧಾಶ್ರವಣಾನಿ ಮೂಲಾ ।
ಧನಿಷ್ಠರೇವತ್ಯಖಿಲೇ ಪ್ರಯಾಣೇ ಫಲಂ ಲಭೇಚ್ಛೀಘ್ರನಿವರ್ತನಂ ಚ ॥ 91 ॥

ಅಶ್ವಿನೀ, ಮೃಗಶಿರಾ, ಪುನರ್ವಸು, ಪುಷ್ಯ, ಹಸ್ತ, ಅನುರಾಧಾ, ಮೂಲ, ಶ್ರವಣ, ಧನಿಷ್ಠೆ, ರೇವತಿ –ಇವು ಯಾತ್ರೆಗೆ ಶುಭನಕ್ಷತ್ರಗಳು

ಚರಲಗ್ನೇ ಚ ಗಂತವ್ಯಂ ದ್ವಿಸ್ವಭಾವೇ ಸದಾ ನೃಪೈಃ ।
ಲಗ್ನೇ ಸ್ಥಿರೇ ನ ಗಂತವ್ಯಂ ಯಾತ್ರಾಯಾಃ ಕ್ಷೇಮಮಿಚ್ಛತಾ ॥ 92 ॥

ಚರಲಗ್ನದಲ್ಲಿ ಯಾತ್ರೆ ಹೊರಡಬೇಕು. ಉಭಯರಾಶಿಗಳೂ ಗ್ರಾಹ್ಯ. ಸ್ಥಿರಲಗ್ನದಲ್ಲಿ ಹೊರಡಬಾರದು.

## ॥ ಔಷಧಸೇವನೆ ॥

ಚಿತ್ರಾದ್ವ್ಯಶ್ವಿವಿಧಿತ್ರಿವಾರುಣಗುರು ಶ್ರೀಶಾಃ ಕುಜಾರ್ಕಾರ್ಯವಿತ್
ವಾರಾಂಬುಕ್ಷಯದುಷ್ಟಯೋಗಚರವೀಣಾಂತ್ಯಾಲಿರಿಕ್ತಾಃ ಶುಭಾಃ ।
ನೋ ಪೂರ್ಣಾ ನಿಧನಾರಿಗಾ ಅಪಿ ಖರಾ ಜನ್ಮತ್ರಯಂ ಚೌಷಧೇ
ನೇತ್ರೇಽಚ್ಯೋಗ್ರದಿನಾಂಧಭಾನಿ ಶುಭದಾಃ ಸೂತೌ ಚರಾಧೋಮುಖಾಃ ॥ 93 ॥

ಅಶ್ವಿನಿ, ರೋಹಿಣಿ, ಮೃಗಶಿರೆ, ಆರ್ದ್ರೆ, ಪುಷ್ಯ, ಚಿತ್ರೆ, ಸ್ವಾತಿ, ಶ್ರವಣ, ಶತಭಿಷಾ –ಇವು ಔಷಧಸೇವನೆಗೆ ಶುಭ. ರವಿಕುಜಬುಧಗುರುವಾರಗಳು, ಜಲ ಹ್ರಾಸ, ದುಷ್ಟಯೋಗಗಳು (ದಗ್ಧಾದಿಯೋಗ), ಚರರಾಶಿ, ಮಿಥುನ, ವೃಶ್ಚಿಕ, ಮೀನರಾಶಿಗಳು, ರಿಕ್ತಾತಿಥಿಗಳು (ಚತುರ್ಥಿ–ನವಮಿ–ಚತುರ್ದಶಿ) ಪ್ರಶಸ್ತ.

ಪೂರ್ಣಾತಿಥಿಗಳು (ಪಂಚಮಿ–ದಶಮಿ–ಹುಣ್ಣಿಮೆ–ಅಮಾವಾಸ್ಯೆ), ಷಷ್ಠ–ಅಷ್ಟಮದಲ್ಲಿ ಪಾಪಿಗಳು, ಜನ್ಮ ಅನುಜನ್ಮ ತ್ರಿಜನ್ಮಗಳು ಶುಭವಲ್ಲ ನೇತ್ರಸಂಬಂಧ ಔಷಧಕ್ಕೆ ಆದಿತ್ಯ–ಕುಜ–ಶುಕ್ರ–ಶನಿವಾರಗಳು ಅಂಧನಕ್ಷತ್ರಗಳು ವರ್ಜ್ಯ. ಪ್ರಸವಕ್ಕೆ ಚರರಾಶಿಗಳು, ಅಧೋಮುಖ ರಾಶಿಗಳು ಪ್ರಶಸ್ತ.

## ॥ ಅಂಧಾದಿನಕ್ಷತ್ರಗಳು ॥

ಅಂಧಭಂ ತದನು ಮಂದಲೋಚನಂ
ಮಧ್ಯಲೋಚನಮತಃ ಸುಲೋಚನಮ್ ।

**ರೋಹಿಣೀ ಪ್ರಭೃತಿಭಿಶ್ಚತುರ್ವಿಧಂ**
**ಸಾಭಿಜಿಚ್ಚ ಗಣಯೇತ್ ಪುನಃ ಪುನಃ ॥ 94 ॥**

ರೋಹಿಣೀ ಅಂಧದೃಷ್ಟಿ, ಮೃಗಶಿರೆ ಮಂದದೃಷ್ಟಿ, ಆರ್ದ್ರೆ ಮಧ್ಯದೃಷ್ಟಿ, ಪುನರ್ವಸು ಪೂರ್ಣದೃಷ್ಟಿ –ಈ ರೀತಿ ಅನುಕ್ರಮವಾಗಿ ಎಲ್ಲಾ ನಕ್ಷತ್ರಗಳ ದೃಷ್ಟಿ ಸಂಜ್ಞೆ ಆವೃತ್ತಿಯಾಗುತ್ತದೆ. ಉತ್ತರಾಷಾಢಾ ಮುಗಿದ ಮೇಲೆ ಅಭಿಜಿತ್ತನ್ನು ಸೇರಿಸಿ ಗಣಿಸಬೇಕು.

## ॥ ಜಲವೃದ್ಧಿಕ್ಷಯ ॥

**ಚಂದ್ರೇ ವ್ಯಯಾಯ ತನುಷಟ್ ಸುತಕಾಮಸಂಸ್ಥೇ**
**ತೋಯಾಭಿವೃದ್ಧಿಮಿಹ ಶಂಸತಿ ವೃದ್ಧಿಕಾರ್ಯೇ ॥ 95 ॥**

ಚಂದ್ರನು ಲಗ್ನ ಪಂಚಮ ಷಷ್ಠ ಸಪ್ತಮ ಏಕಾದಶ ದ್ವಾದಶಗಳಲ್ಲಿದ್ದರೆ ಜಲವೃದ್ಧಿ; ಇತರ 6 ರಾಶಿಗಳಲ್ಲಿ ಜಲಕ್ಷಯವೆಂದು ತಿಳಿಯಬೇಕು. ಅಥವಾ ಚಂದ್ರೋದಯದಿಂದ 15 ಗಳಿಗೆ ವೃದ್ಧಿ. ಅನಂತರ 15 ಗಳಿಗೆ ಕ್ಷಯ. ಈ ರೀತಿಯ ಆವೃತ್ತಿ ಇರುತ್ತದೆ.

## ॥ ನೊಗ ಇಡಲು ॥

**ಶಶಿಶಿವಪಿತೃರಕ್ಷಃ ಪೌಷ್ಣಪೂರ್ವೋತ್ತರೇಂದ್ರ–**
**ಜ್ವಲನವರುಣಮಿತ್ರೇಷ್ವಿಂದುಜೀವಜ್ಞವಾರೇ ।**
**ಯುಗಮುಪರಿ ವೃಷಾಣಾಂ ವಿನ್ಯಸೇಯುರ್ವಿಹಾಯ**
**ಸ್ಥಿರಕರಣಮೃಗೇಂದ್ರವ್ಯಾಘ್ರ ವಿಷ್ಟೀಃ ಸರಿಕ್ತಾಃ ॥ 96 ॥**

ಕೃತ್ತಿಕೆ, ಮೃಗಶಿರೆ, ಆರ್ದ್ರೆ, ಮಖೆ, ಹುಬ್ಬೆ, ಪೂರ್ವಾಷಾಢಾ, ಪೂರ್ವಾಭಾದ್ರಾ, ಉತ್ತರೆ, ಉತ್ತರಾಷಾಢಾ, ಉತ್ತರಾಭಾದ್ರಾ, ಅನುರಾಧಾ, ಜ್ಯೇಷ್ಠಾ, ಮೂಲಾ, ಶತಭಿಷಾ, ರೇವತಿ –ಈ ನಕ್ಷತ್ರಗಳು ಶುಭ. ಸೋಮ–ಬುಧ–ಗುರುವಾರಗಳು ಪ್ರಶಸ್ತ. ಸ್ಥಿರಕರಣಗಳನ್ನು, ಸಿಂಹ–ವ್ಯಾಘ್ರ–ವಿಷ್ಟಿಗಳನ್ನು, ರಿಕ್ತಾ ತಿಥಿಗಳನ್ನು ಬಿಡಬೇಕು.

## ॥ ಕೃಷಿ ॥

**ಮೀನ ಗೋಮಿಥುನನಕ್ರಕರ್ಕಟವ್ಯಾಘ್ರಸಿಂಹಕರಿವಾರಿವೃದ್ಧಯಃ ।**
**ಪುಷ್ಯಪೌಷ್ಣಸುರಸೂತ್ತರಾಸುರಬ್ರಧ್ನಧಾತೃರವಿವಾಸರಾಃ ಶುಭಾಃ ॥ 97 ॥**

ಮೀನ, ವೃಷಭ, ಮಿಥುನ, ಕರ್ಕಾಟಕ, ಮಕರರಾಶಿಗಳು, ಸಿಂಹ–ವ್ಯಾಘ್ರ–ಗಜಕರಣಗಳು, ಜಲವೃದ್ಧಿ; ಪುಷ್ಯ, ರೇವತಿ, ಪುನರ್ವಸು, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಾ, ಮೂಲ, ಹಸ್ತಾ, ರೋಹಿಣೀನಕ್ಷತ್ರಗಳು, ಆದಿತ್ಯವಾರ –ಇವು ಕೃಷಿಗೆ ಶುಭಪ್ರದ.

## ॥ ಬೀಜಾವಾಪ ॥

ಸ್ಥಿರಾಖ್ಯವಿಷ್ಟಿ ಗೋಕೋಲ ಕರಣಾನಿ ವಿವರ್ಜಯೇತ್ ।
ಜಲಹ್ರಾಸಂ ಪ್ರತಿಪದಂ ಖಾಂಬುಚಂದ್ರಂ ಚ ವರ್ಜಯೇತ್ ॥ 98 ॥

ಪೂರ್ವಾಹಿಯುಗ್ಮೇಂದ್ರಯಮಾ ವಿವರ್ಜ್ಯಾ
ಶ್ಚಿತ್ರಾ ವಿಶೇಷಾದಿಹ ಬೀಜವಾಪೇ ॥ 99 ॥

ಸ್ಥಿರಕರಣಗಳು, ವಿಷ್ಟಿ, ಗೋಕರಣ, ವರಾಹಕರಣಗಳನ್ನು ಬಿಡಬೇಕು. ಭರಣಿ, ಆಶ್ಲೇಷಾ, ಮಖೆ, ಹುಬ್ಬೆ, ಪೂರ್ವಾಷಾಢಾ, ಪೂರ್ವಾಭಾದ್ರಾ, ಜ್ಯೇಷ್ಠಾಚಿತ್ರಾಗಳನ್ನು ಬಿಡಬೇಕು.

ಜಲಕ್ಷಯ, ಪ್ರತಿಪತ್ತಿಥಿ, ಚತುರ್ಥದಶಮಗಳ ಚಂದ್ರ –ಇವು ಬಿತ್ತನೆಗೆ ವರ್ಜ್ಯ

## ॥ ಕದಿರುಕಟ್ಟಲು ॥

ಕುಂಭಪೂರ್ತಿತಿಥಿಭಾಂಬುಚಂದ್ರಮೋವೃದ್ಧಿರಿಃಷರಿಪುಃಚಂದ್ರಮಂದದೃಕ್ ।
ಧಾನ್ಯವೃದ್ಧಿಶುಭದಂ ನ ಕೃತ್ತಿಕಾ ಶಕ್ರ ನಕ್ರವಣಿಗಾದ್ಯರಾಶಯಃ ॥ 100 ॥

ಕುಂಭಪೂರ್ತಿ ಗುಣವಿರುವ ನಕ್ಷತ್ರಗಳು ಕದಿರುಕಟ್ಟಲು ಉತ್ತಮ. ತಿಥಿವೃದ್ಧಿ, ನಕ್ಷತ್ರವೃದ್ಧಿ, ಜಲವೃದ್ಧಿ, ಚಂದ್ರವೃದ್ಧಿ, ಷಷ್ಠದ್ವಾದಶಗಳ ಚಂದ್ರ–ಶನಿದೃಷ್ಟಿ –ಈ ಗುಣಗಳಿರುವಾಗ ಕದಿರು ತರುವುದು, ಧಾನ್ಯ ತರುವುದು ಶುಭ. ಕೃತ್ತಿಕಾ, ಜ್ಯೇಷ್ಠಾ ನಕ್ಷತ್ರಗಳು ವರ್ಜ್ಯ. ಮೇಷ–ತುಲಾ–ಮಕರ ರಾಶಿಗಳು ವರ್ಜ್ಯ.

## ॥ ಕುಂಭಪೂರ್ತಿ ॥

ಶಿಖಿಮಘವಸುಮಿತ್ರಾತ್ರ್ಯಸ್ತ್ರರೇಕೈಕವರ್ಗಃ
ತ್ರಿದಶಜನನಿ ಚಿತ್ರಾವಿಷ್ಣುಪೌಷ್ಣಾತ್ತಥೈಕಃ ।
ಶಿವರವಿಜಲಬುಧ್ನಾ ಶ್ಚೈಕವರ್ಗೋರ್ಕಸಂಸ್ಥೋ
ಜಲರಹಿತಘಟೋಽನ್ಯೌ ಪೂರ್ಣಕುಂಭೌ ಚ ವರ್ಗೌ ॥ 101 ॥

ಕೃತ್ತಿಕಾ, ರೋಹಿಣೀ, ಮೃಗಶಿರೆ, ಮಖಾ, ಹುಬ್ಬಾ, ಉತ್ತರಾ, ಧನಿಷ್ಠಾ, ಶತಭಿಷಾ, ಪೂರ್ವಾಭಾದ್ರಾ, ಅನುರಾಧಾ, ಜ್ಯೇಷ್ಠಾ, ಮೂಲಾ –ಈ 12 ಒಂದು ವರ್ಗ.

ಅಶ್ವಿನಿ, ಭರಣಿ, ಪುನರ್ವಸು, ಪುಷ್ಯ, ಆಶ್ಲೇಷೆ, ಚಿತ್ರೆ, ಸ್ವಾತಿ, ವಿಶಾಖೆ, ಶ್ರವಣ, ಧನಿಷ್ಠಾ, ಶತಭಿಷಾ, ರೇವತಿ –ಈ 12 ಒಂದು ವರ್ಗ. ಆರ್ದ್ರೆ, ಹಸ್ತಾ, ಪೂರ್ವಾಷಾಢಾ, ಉತ್ತರಾಭಾದ್ರಾ –ಒಂದು ವರ್ಗ

ಇವುಗಳಲ್ಲಿ ಯಾವ ವರ್ಗದಲ್ಲಿ ರವಿ ಇದ್ದಾನೋ ಆ ವರ್ಗವಿಡೀ ಕುಂಭಪೂರ್ತಿರಹಿತ ಇತರ ೨ ವರ್ಗಗಳು ಕುಂಭಪೂರ್ತಿ ಸಹಿತವಾಗಿರುತ್ತವೆ

ಅಯನೇ ಚೋತ್ತರೇ ಶುಕ್ಲಪಕ್ಷೇ ಮುಖ್ಯಾಃ ಶುಭಕ್ರಿಯಾಃ ।
ಚೌಲೋಪನಯ ಗೋದಾನವ್ರತಸ್ನಾನೇಷು ದಕ್ಷಿಣಮ್ ॥ 102 ॥

ಅಯನಂ ವರ್ಜಯೇದೇವ ಪ್ರತಿಷ್ಠಾದಿ ತ್ರಿಕೇಷ್ವಪಿ ॥ 103 ॥

ಚೌಲೋಪನಯಗೋದಾನವ್ರತಸೀಮಂತ ಕರ್ಮಸು
ಪ್ರಸವಾತ್ ಪ್ರಾಗ್ವಿಷ್ಣುಬಲೌ ಗೃಹಸ್ಥಾಗ್ರಯಣೇ ತಥಾ ॥ 104 ॥

ಶುಕ್ಲಪಕ್ಷತ್ವ ನಿಯಮೋ ವಿಶೇಷೇಣ ಪ್ರವರ್ತತೇ ॥
ಪ್ರತಿಷ್ಠಾ ಪ್ರಥಮಾ ಶುಕ್ಲಪಕ್ಷ ಏವ ಶುಭಾ ಸ್ಮೃತಾ ॥ 105 ॥

ಉತ್ತರಾಯಣ ಶುಕ್ಲಪಕ್ಷಗಳಲ್ಲಿ ಶುಭಕರ್ಮಗಳನ್ನು ಮಾಡುವುದು ಬಹಳ ಉತ್ತಮ. ಚೌಲ, ಉಪನಯನ, ಗೋದಾನ, ವ್ರತ–ಸ್ನಾನಗಳಲ್ಲಿ ದಕ್ಷಿಣಾಯನ ಬಿಡಬೇಕು. ಪ್ರತಿಷ್ಠಾ, ಬ್ರಹ್ಮಕಲಶ, ಉತ್ಸವ (ಸಾತ್ವಿಕ ದೇವತೆಗಳ)ಗಳು ದಕ್ಷಿಣಾಯನದಲ್ಲಿ ವರ್ಜ್ಯ. ಚೌಲ, ಉಪನಯನ, ಗೋದಾನ, ವ್ರತ, ಸೀಮಂತ, ವಿಷ್ಣುಬಲಿ, ಗೃಹಸ್ಥಾಗ್ರಯಣಗಳಲ್ಲಿ ಶುಕ್ಲಪಕ್ಷವೇ ಆಗಬೇಕೆಂಬ ನಿಯಮವಿದೆ. ಮೊದಲ ಪ್ರತಿಷ್ಠೆಯಂತೂ ಶುಕ್ಲಪಕ್ಷದಲ್ಲೇ ನಡೆಯತಕ್ಕದ್ದು

ಅತಿಪಾತಿಷು ಕಾರ್ಯೇಷು ಗ್ರಹಾನ್ ಸಂಪೂಜ್ಯಭಕ್ತಿತಃ
ದಕ್ಷಿಣಾಂ ವಿಪುಲಾಂ ದತ್ವಾ ದೈವಜ್ಞಂ ಸಮ್ಯಗರ್ಚ್ಯ ಚ
ಕರ್ತವ್ಯಾನ್ಯತ್ರ ಕರ್ಮಾಣಿ ದೋಷೇಷೂಕ್ತೇಷು ಸತ್ಸ್ವಪಿ ॥ 106 ॥

ಅನಿವಾರ್ಯವಾದರೆ ದೋಷಗಳಿದ್ದ ಮುಹೂರ್ತದಲ್ಲಿಯೂ ನವಗ್ರಹರನ್ನು ಭಕ್ತಿಯಿಂದ ಆರಾಧಿಸಿ ದಾನದಕ್ಷಿಣಾದಿಗಳನ್ನು ವಿಪುಲವಾಗಿ ಕೊಟ್ಟು ದೈವಜ್ಞರನ್ನು ಸಂತೋಷಪಡಿಸಿ ಕರ್ಮಗಳನ್ನು ಮಾಡತಕ್ಕದ್ದು.

ವಿಶ್ವೇಶತೀರ್ಥ ಶ್ರೀಪಾದಗುರೋರಾಜ್ಞಾವಶಾನ್ಮಯಾ ।
ಕೃತೋಽಯಂ ಸಂಗ್ರಹಗ್ರಂಥಃ ಮಧ್ವೇಶಃ ಪ್ರಿಯತಾಂ ಹರಿಃ ॥ 107 ॥

ಪರ್ಯಾಯ ಮಠಾಧೀಶರಾದ ಪರಮಪೂಜ್ಯ ಶ್ರೀಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದವಗಳವರ ಅಪ್ಪಣೆಯಂತೆ ನಾನು ಸಂಗ್ರಹಗ್ರಂಥವನ್ನು ರಚಿಸಿದ್ದೇನೆ

ಮಧ್ವಾಂತರ್ಗತ ಶ್ರೀಕೃಷ್ಣಪರಮಾತ್ಮನು ಸುಪ್ರೀತನಾಗಲಿ.

॥ ಇತಿ ಮುಹೂರ್ತಮಾರ್ಗದರ್ಶಿನ್ಯಾಂ ಸಂಸ್ಕಾರಮುಹೂರ್ತಾಧ್ಯಾಯಃ ಪಂಚಮಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥

* * *

## ॥ ಪರಿಶಿಷ್ಟಾಧ್ಯಾಯ ॥

### (ಪ್ರಶ್ನಸಂಗ್ರಹ ಪೂರ್ವಾರ್ಧ)

ಗುರುಭ್ಯಶ್ಚ ಗ್ರಹೇಭ್ಯಶ್ಚ ಮಯಾ ಬದ್ಧೋಽಯಮಂಜಲಿಃ ।
ಪ್ರಸನ್ನಮನಸಸ್ತೇ ಮೇ ಸತ್ಯಾಂ ಕುರ್ವಂತು ಭಾರತೀಮ್ ॥ 1 ॥

ಶ್ರೀಗುರುಗಳಿಗೂ ನವಗ್ರಹದೇವತೆಗಳಿಗೂ ನಮಸ್ಕರಿಸುತ್ತೇನೆ. ಅವರು ಪ್ರಸನ್ನಮನಸ್ಕರಾಗಿ ನನ್ನ ಮಾತನ್ನು ಸತ್ಯವನ್ನಾಗಿ ಮಾಡಲಿ.

### ॥ ದೈವಜ್ಞಬ್ರಾಹ್ಮಣವರಣಮ್ ॥

ಧನಾನ್ಯಾಯುಃ ಶ್ರಿಯಂ ಕೀರ್ತಿಮಿಚ್ಛತಾ ಬ್ರಾಹ್ಮಣಃ ಸ್ವಯಮ್ ।
ದೈವಜ್ಞೋ ದೇವವತ್ ಪೂಜ್ಯಃ ಸರ್ವಕಾರ್ಯೇಷು ವೃತ್ರಹನ್ ॥ 2 ॥

ಎಲ್ಲಾ ಕಾರ್ಯಗಳಲ್ಲಿಯೂ ಧನಧಾನ್ಯ ಭಾಗ್ಯ ಆಯುಸ್ಸು ಕಾಂತಿ ಕೀರ್ತಿಗಳನ್ನು ಇಚ್ಛಿಸುವವರು ದೈವಜ್ಞನನ್ನು ದೇವರ ಹಾಗೆ ಗೌರವಿಸಿ ವರಣೆ ಮಾಡಬೇಕು.

### ॥ ದೈವಜ್ಞಸಮಾಹಿತತ್ವ ॥

ಶಾಂತೋ ವಿವೇಕೀ ಶುದ್ಧಾತ್ಮಾ ಪೂಜನೇ ಚಿಂತನೇ ರತಃ ।
ಜ್ಯೋತಿಶ್ಶಾಸ್ತ್ರಪ್ರವೀಣಶ್ಚ ಸಮಾಹಿತಮನಾಃ ಸ್ಮೃತಃ ॥ 3 ॥

ಶಾಂತಸ್ವಭಾವವುಳ್ಳವರೂ ವಿವೇಕಶೀಲರೂ ಶುದ್ಧಮನಸ್ಸುಳ್ಳವರೂ ಸದಾಕಾಲ ದೇವತಾರ್ಚನೆ ಚಿಂತನೆಗಳಲ್ಲಿ ನಿರತರೂ ಜ್ಯೋತಿಶ್ಶಾಸ್ತ್ರದಲ್ಲಿ ಪ್ರವೀಣರೂ ಆಗಿದ್ದವರು ಸಮಾಹಿತಮನಸ್ಕರೆಂದು ಹೇಳಲ್ಪಡುತ್ತಾರೆ.

ಜ್ಯೋತಿಶ್ಶಾಸ್ತ್ರೇ ಬ್ರಾಹ್ಮಣಸ್ಯೈವಾಧಿಕಾರಃ ವೇದಾಂಗತ್ವಾತ್ । ತಥಾ ಚೋಕ್ತಂ–

ಅಧ್ಯೇತವ್ಯಂ ಬ್ರಾಹ್ಮಣೈರೇವ ತಸ್ಮಾತ್
ಜ್ಯೋತಿಶ್ಶಾಸ್ತ್ರಂ ಪುಣ್ಯಮೇತದ್ರಹಸ್ಯಮ್ ।
ಏತದ್ಬುಧ್ವಾ ಸಮ್ಯಗಾಪ್ನೋತಿ ಯಸ್ಮಾ–
ದರ್ಥಂ ಧರ್ಮಂ ಮೋಕ್ಷಮಗ್ರ್ಯಂ ಯಶಶ್ಚ ॥ 4 ॥

'ಸ್ವಾಧ್ಯಾಯೋಽಧ್ಯೇತವ್ಯಃ ನಿಷ್ಕಾರಣಂ ಬ್ರಾಹ್ಮಣೇನ ಷಡಂಗಸಹಿತೋ ವೇದೋಽಧ್ಯೇತವ್ಯಃ' ಎಂಬ ವಿಧಿಯಂತೆ ಬ್ರಾಹ್ಮಣನು ಷಡಂಗಗಳಲ್ಲೊಂದಾದ ಜ್ಯೋತಿಶ್ಶಾಸ್ತ್ರವನ್ನು ಕಲಿಯಲೇಬೇಕು.

ಮುಹೂರ್ತಾದಿಗಳ ನಿರ್ವಚನದಲ್ಲಿ ಬ್ರಾಹ್ಮಣನು ಮಾತ್ರ ಅಧಿಕಾರಿಯಾಗಿರುತ್ತಾನೆ. 'ವೇದಾಧ್ಯಯೀ ವಿನೀತೋ ಗ್ರಹಯ ಜನಪರಃ'[1] ಇತ್ಯಾದಿ ಶಾಸ್ತ್ರೋಕ್ತಿಗಳು ಇದನ್ನು ದೃಢಪಡಿಸುತ್ತವೆ

## ॥ ಅನಿಷ್ಟಸಂಭವಾತ್ ಅಪರಾಧ ಸೂಚನಾ ॥

ಯಸ್ಯ ದೃಶ್ಯೇತ ವರ್ಷೈಕಾದುಕ್ತವಾಕ್ಯಸ್ಯ ವಾದಿನಃ ।
ರೋಗೋಽಗ್ನಿಜ್ಞಾತಿಮರಣಂ ಸೋಽಪರಾಧೀ ಪ್ರಕೀರ್ತ್ಯತೇ ॥ 5 ॥

ಏನಾದರೂ ದುರ್ನಡತೆ, ದುರ್ವಾಕ್ಕುಗಳು ಸಂಭವಿಸಿದ ಮೇಲೆ ಅಸೌಖ್ಯ, ಅಗ್ನ್ಯಾದಿಭಯ, ಸ್ವಜನವಿಯೋಗ ಮುಂತಾದ್ದು ನಡೆದರೆ ಸಂಭವಿಸಿದ್ದು ಅಪರಾಧವಾಗಿದೆ ಎಂದು ಹೇಳಬೇಕು

## ॥ ಫಲಕಥನನಿಯಮಃ ॥

ಯಸ್ಮಿನ್ ಕ್ರಮೋ ಸಂಗೃಹೀತೇ ಪೂರ್ವಮುಕ್ತಂ ಶುಭಾಶುಭಮ್ ।
ನ ವಿಸಂವಾದಮಭ್ಯೇತಿ ಸಕ್ರಮಃ ಶಾಸ್ತ್ರಸಮ್ಮತಃ ॥ 6 ॥

ಯಾವ ಕ್ರಮವನ್ನನುಸರಿಸಿ ಶುಭಾಶುಭಫಲಗಳನ್ನು ನಿರೂಪಿಸಲು ಪ್ರಾರಂಭಿಸಿದೆಯೋ, ಅದೇ ಕ್ರಮವನ್ನು ಕೊನೆಯವರೆಗೂ ಅನುಸರಿಸುವುದು ಶಾಸ್ತ್ರಸಮ್ಮತವಾದ ಫಲಕಥನದ ರೀತಿ. ಉದಾಹರಣೆಗೆ, ನೀಚಶನಿ ಕರ್ಮದಲ್ಲಿರುವಲ್ಲಿ 'ಪಾಪೈರೇವಂ ತಸ್ಯ ಭಾವಸ್ಯ ಹಾನಿಃ' ಎಂಬ ನ್ಯಾಯದಂತೆ ದೇವಲಕನ ದೋಷವನ್ನು ಹೇಳಬಹುದು. ಆದರೆ–

ಚತುಃಸ್ಫುಟಕ್ಷೇ ಚರರಾಶಿಸಂಸ್ಥೇ ಚರಾಂಶಕೇ ಪಾಪಯುತೇಕ್ಷಿತೇ ವಾ ।
ದೇವಾಲಯೇ ದೇವಲಕಸ್ಯ ದೋಷಾತ್
ಸಾನ್ನಿಧ್ಯನಾಶಂ ಮುನಯೋ ವದಂತಿ ॥

(ಪ್ರಶ್ನಸಂಗ್ರಹ 10-90)

ಈ ಲಕ್ಷಣವಿಲ್ಲದಿದ್ದರೆ ದಶಮಶನಿಯಿಂದ 'ನಿತ್ಯಾನ್ಯಪ್ಯುತ್ಸವಾದೀನಿ' ಎಂಬ ಶಾಸ್ತ್ರವಚನದಂತೆ ಉತ್ಸವಾದಿಗಳಲ್ಲಿ ರಕ್ಷಕ–ಆಚಾರ್ಯ–ಪರಿಜನಾದಿಗಳ ಮೂಲಕ ನ್ಯೂನತೆಗಳನ್ನು ಹೇಳಬಹುದಲ್ಲದೆ ದೇವಲಕಾದಿ ದೋಷಗಳನ್ನು ಹೇಳುವುದು ಸಕ್ರಮವಾಗುವುದಿಲ್ಲ ಇದೇ ರೀತಿ ಪ್ರತಿಯೊಂದಕ್ಕೂ ಸ್ಪಷ್ಟವಚನವನ್ನು ನಿರೂಪಿಸುವುದು ದೈವಜ್ಞನ ಕರ್ತವ್ಯ.

---

1 ವೇದಾಧ್ಯಾಯೀ ವಿನೀತೋ ಗ್ರಹಯಜನಪರಃ ಸತ್ಯವಾದೀ ಸುವೃತ್ತೋ ।
ಜ್ಯೋತಿಶ್ಶಾಸ್ತ್ರಪ್ರವೀಣೋ ಗ್ರಹಗಣಿತಪಟುಃ ಸೋಽತ್ರ ದೈವಜ್ಞ ಉಕ್ತಃ ।
ತುಷ್ಟೇ ತಸ್ಮಿನ್ ಮುಹೂರ್ತಂ ಪ್ರದಿಶತಿ ವಿಬುಧಾಃ ಪೂಜಿತಾವೀರ್ಯವಂತಃ ।
ತುಷ್ಟಾಃ ಸ್ಯುಃ ಸದ್ಗ್ರಹೇಂದ್ರಾಃ ಪರಿಭವಕುಪಿತೇ ದುರ್ಬಲಾಃ ಸಕ್ರುಧಾಃ ಸ್ಯುಃ ॥

## ॥ ಚಂದ್ರಸ್ಯ ಕ್ಷೀಣತಾ ॥

ಅಮಾವಾಸ್ಯಾ ಚತುರ್ದಶ್ಯೋಃ ಕ್ಷೀಣಶ್ಚಂದ್ರೋ ನ ಸರ್ವದಾ ॥ 7 ॥

ಕೃಷ್ಣಪಕ್ಷ ಚತುರ್ದಶಿ ಅಮಾವಾಸ್ಯೆಗಳ ಚಂದ್ರನು ಸಂಪೂರ್ಣ ಕ್ಷೀಣವೆಂದು ತಿಳಿಯಬೇಕು.

ಕೃಷ್ಣಾಷ್ಟಮ್ಯಪರಾರ್ಧಶ್ವೇತಾಷ್ಟಮ್ಯಾದಿ ಮಾರ್ಧಮಧ್ಯಗತಃ ।
ಹಿಮರಶ್ಮಿಃ ಕ್ಷೀಣಃ ಸ್ಯಾತ್ತದನ್ಯಥಾಸ್ಥಃ ಶುಭಶ್ಚ ಪೂರ್ಣಶ್ಚ ॥ 8 ॥

ಕೃಷ್ಣಾಷ್ಟಮಿಯ ಅಪರಾರ್ಧದಿಂದ ಶುಕ್ಲಾಷ್ಟಮಿಯ ಪೂರ್ವಾರ್ಧದ ವರೆಗೆ ಚಂದ್ರನು ಕ್ಷೀಣನಾಗಿರುತ್ತಾನೆ. ಇತರ 15 ದಿನಗಳಲ್ಲಿ ಅವನು ಶುಭಪ್ರದ ನಾಗಿರುತ್ತಾನೆ.

## ॥ ಗ್ರಹಗಳ ಇಷ್ಟಾನಿಷ್ಟಸ್ಥಿತಿ ॥

(ಉತ್ತರ ಕಾಲಾಮೃತದಂತೆ)

ಕೇಂದ್ರಭ್ರಾತೃಧನಾಯ ಧೀನವಮಗಾಃ ಷಷ್ಠೇಽಪಿ ಸೌಮ್ಯಾಃ ಶುಭಾಃ
ಕ್ರೂರಾಶ್ಚೋಪಚಯಸ್ಥಿತಾ ರವಿಶನೀ ಧರ್ಮಸ್ಥಿತೌ ಜ್ಞೋಽಷ್ಟಮೇ ।
ಸ್ವೋಚ್ಚಸ್ವರ್ಕ್ಷಸುರೇಜ್ಯಭಸ್ಥರವಿಜೋ ಲಗ್ನಸ್ಥಿತೋಽಪೀಷ್ಟಕೃತ್
ಶುಕ್ರೋ ದ್ವಾದಶಸಂಸ್ಥಿತೋಽಪಿ ಶುಭದೋ ಮಂದಾಂಶರಾಶೀ ವಿನಾ ॥ 9 ॥

ಶುಭಗ್ರಹಗಳು 1, 2, 3, 4, 5, 6, 7, 9, 10, 11ನೆ ಭಾವಗಳಲ್ಲಿ ಇರುವುದು ಶುಭ. ಕ್ರೂರಗ್ರಹಗಳು 3, 6, 10, 11ರಲ್ಲಿ ಇರುವುದು ಶುಭ. ರವಿಶನಿಗಳು ನವಮದಲ್ಲಿರುವುದೂ ಶುಭವೆ. ಬುಧನಿಗೆ ಅಷ್ಟಮವೂ, ಶನಿಕ್ಷೇತ್ರ ಶನ್ಯಂಶಗಳನ್ನು ಬಿಟ್ಟು ದ್ವಾದಶದಲ್ಲಿ ಬಂದ ಶುಕ್ರನೂ ಶುಭ ಉಚ್ಚ ಸ್ವಕ್ಷೇತ್ರ ಗುರುಕ್ಷೇತ್ರಗಳಲ್ಲಿರುವ ಶನಿಯು ಲಗ್ನದಲ್ಲಿ ಬಂದರೂ ಸಹ ಶುಭಪ್ರದನೆ.

ಸೋದರಾರಾತಿಗಃ ಶುಕ್ರಃ ಶೋಕಮೋಹಭಯಪ್ರದಃ ।
ಸ ಏವ ಶುಭಸಂಧಾತಾ ಪುರತೋ ಯದಿ ಭಾಸ್ಕರಾತ್ ॥ 10 ॥

ಶುಕ್ರನು 3, 6ನೆ ಭಾವಗಳಲ್ಲಿದ್ದರೆ ಶೋಕವನ್ನೂ, ಮೋಹವನ್ನೂ, ಭಯವನ್ನೂ ಉಂಟುಮಾಡುತ್ತಾನೆ ಸೂರ್ಯನಿಂದ ಅವನು ಮುಂದಿದ್ದರೆ ಶುಭಪ್ರದನಾಗಿರುತ್ತಾನೆ.

## ॥ ಬಹುಗ್ರಹಯೋಗಫಲಮ್ ॥

ಪ್ರಾಯೋ ದರಿದ್ರದುಃಖೀ ಮೂರ್ಖಃ ಷಟ್ ಪಂಚ ಸಂಯುತೈರ್ವಿಹಗೈಃ ।
ಅನ್ಯೋನ್ಯದರ್ಶನಾದಪಿ ಫಲಮೇತತ್ ಕಂದಲಾಃ ಪ್ರಾಹುಃ ॥ 11 ॥

ಐದಾರು ಗ್ರಹಗಳು ಒಟ್ಟಿಗೆ ಇದ್ದರೆ ಅಥವಾ ಪರಸ್ಪರ ದೃಷ್ಟರಾಗಿದ್ದರೆ ದಾರಿದ್ರ್ಯ, ದುಃಖ, ಮೂರ್ಖತನಗಳು ಫಲವಾಗಿರುತ್ತವೆ.

**ರಾಶಿಸಂಧಿಗತಾಃ ಖೇಟಾಃ ತೇ ನರಾ ಜಡಜೀವನಾಃ ॥ 12 ॥**

ರಾಶಿಸಂಧಿಯಲ್ಲಿರುವ ಗ್ರಹಗಳ ಫಲಾನುಭವ ಕಾಲದಲ್ಲಿ ಆಲಸ್ಯ ದೌರ್ಭಾಗ್ಯಗಳುಂಟಾಗುವುವು.

## ॥ ಬಾಧಾವಿಚಾರಃ ॥

**ಆರೂಢರಾಶೌ ಚರ ಆಯುರಾಶೌ**
**ಸ್ಥಿರೇ ತು ಬಾಧಾ ನವಮೇ ವಿಚಿಂತ್ಯಾ ।**
**ತಥೋಭಯೇ ಕಾಮಗೃಹೇ ತ್ರಯಾಣಾಂ**
**ಕೇಂದ್ರೇಷು ಚೈಷಾಮಿತಿ ಕೇಚಿದಾಹುಃ ॥ 13 ॥**

ಆರೂಢವು ಚರರಾಶಿಯಾಗಿದ್ದರೆ ಏಕಾದಶದಲ್ಲಿ, ಸ್ಥಿರವಾಗಿದ್ದರೆ ನವಮದಲ್ಲಿ, ಉಭಯರಾಶಿಯಾಗಿದ್ದರೆ ಸಪ್ತಮದಲ್ಲಿ ಬಾಧೆ ಎಂದು ತಿಳಿಯಬೇಕು ಕೆಲವರು ಈ ಬಾಧೆಯ ಕೇಂದ್ರಗಳೂ ಬಾಧಾಸ್ಥಾನಗಳೆಂದು ಹೇಳುತ್ತಾರೆ.

**ಕುಂಭಶ್ಚರಾಣಾಮಲಿಚಾಪಸಿಂಹ**
**ಸ್ತ್ರೀಣಾಮಲಿರ್ಗೋರ್ವೃಷಭಸ್ಯ ನಕ್ರಃ ।**
**ಕುಂಭಸ್ಯ ಕರ್ಕೀ ಮಿಥುನಸ್ಯ ಧನ್ವೀ**
**ಮೀನಸ್ಯ ಚಾಪಂ ಖಲು ಬಾಧಕಂ ಸ್ಯಾತ್ ॥ 14 ॥**

ಚರರಾಶಿಗಳಿಗೆ ಕುಂಭವೂ ಸಿಂಹಕನ್ಯಾವೃಶ್ಚಿಕಧನುಗಳಿಗೆ ವೃಶ್ಚಿಕವೂ ಕುಂಭಕ್ಕೆ ಕರ್ಕಾಟಕವೂ ವೃಷಭಕ್ಕೆ ಮಕರವೂ ಮಿಥುನಕ್ಕೆ ಧನುವೂ ವಿಶೇಷ ಬಾಧೆ ಎಂದು ತಿಳಿಯಬೇಕು.

**ಜಾಯಾವರ್ಜ್ಯಂ ತು ಸರ್ವೇಷಾಂ ಯಾಮ್ಯಃ ಪಂಥಾವಿಭಿದ್ಯತೇ ॥ 15 ॥**

ಮೃತೋತ್ತರಗತಿ ಚಿಂತನೆ ಮಾಡುವಾಗ ಪತಿಪತ್ನಿಯರನ್ನು ಬಿಟ್ಟು ಉಳಿದ ಎಲ್ಲರ ಗತಿ ಬೇರೆ ಬೇರೆ ಎಂದು ತಿಳಿಯತಕ್ಕದ್ದು.

## ॥ ಗ್ರಹಗಳ ಧಾತುಗಳು ॥

**ಅಸ್ಥಿರಕ್ತಂ ಚ ಮಜ್ಜಾ ತ್ವಗ್ವಸಾ ಶುಕ್ಲಂ ಚ ವಸ್ನಸಾ ।**
**ಏವಂ ಹಿ ಧಾತವಃ ಸಪ್ತ ಸೂರ್ಯಾದೀನಾಂ ಪ್ರಕೀರ್ತಿತಾಃ ॥ 16 ॥**

ಸೂರ್ಯಾದಿ ಗ್ರಹಗಳಿಗೆ ಕ್ರಮವಾಗಿ ಅಸ್ಥಿ, ರಕ್ತ, ಮಜ್ಜಾ (ಎಲುಬಿನೊಳಗಿನ ದ್ರವ), ಚರ್ಮ, ವಸಾ (ಮಾಂಸದ ರಸ), ಶುಕ್ಲ, ನರನಾಡಿಗಳು –ಧಾತುಗಳಾಗಿ ಇರುತ್ತವೆ.

## || ಪೃಷ್ಠೋದಯಾದಿಗಳಿಂದ ಫಲಗಳು ||

**ಪೃಷ್ಠೋದಯೇಷು ಸಿಧ್ಯತ್ಯಶುಭಂ ಮೂರ್ಧೋದಯೇ ಶುಭಂ ಪ್ರೋಕ್ತಮ್ ।**
**ಉಭಯೋದಯೇ ವಿಮಿಶ್ರಂ ಗ್ರಹರಹಿತೇಭ್ಯಃ ಫಲಂ ವಾಚ್ಯಮ್ || 17 ||**

ಪೃಷ್ಠೋದಯರಾಶಿಯಾದರೆ ಅಶುಭ, ಮೂರ್ಧೋದಯರಾಶಿಯಾದರೆ ಶುಭ, ಉಭಯೋದಯರಾಶಿಯಾದರೆ ಮಿಶ್ರಫಲ ಕಂಡುಬರುತ್ತದೆ. ಅಲ್ಲಿ ಗ್ರಹಗಳಿದ್ದರೆ ಗ್ರಹಗಳ ಫಲವನ್ನು ಹೇಳಬೇಕು.

**ಸವಿತಾ ಗ್ರಹಾಣಾಂ ಪಾಚಯಿತಾ ಚಂದ್ರಮಾಃ ಪ್ರಬೋಧಯಿತಾ ।**
**ಆದಿತ್ಯಚಂದ್ರವಶಗಾಃ ಸರ್ವೇ ತಾರಾಗ್ರಹಾ ಜ್ಞೇಯಾಃ || 18 ||**

ಸೂರ್ಯನು ಗ್ರಹಗಳ ಫಲಗಳನ್ನು ಪಾಕಗೊಳಿಸುವವನೂ ಚಂದ್ರನು ಅದರ ಅನುಭವವನ್ನುಂಟುಮಾಡುವವನೂ ಆಗಿದ್ದಾನೆ. ಎಲ್ಲಾ ತಾರಾಗ್ರಹರು ಆದಿತ್ಯ-ಚಂದ್ರರ ಅಧೀನದಲ್ಲಿದ್ದಾರೆ.

**ಸ್ಥಿರರಾಶೌ ಲಗ್ನಗತೇ ಸ್ಥಾನಪ್ರಾಪ್ತಿಂ ವದೇನ್ನ ಗಮನಂ ಚ ।**
**ರೋಗೋಪಶಮೋ ನಾಶಃ ದ್ರವ್ಯಾಣಾಂ ಸ್ಯಾತ್ ಪರಾಭವೋ ನಾತ್ರ|| 19 ||**

ಸ್ಥಿರರಾಶಿ ಲಗ್ನವಾಗಿ ಬಂದರೆ ಸ್ಥಾನಪ್ರಾಪ್ತಿ ಉಂಟಾಗುತ್ತದೆ. ಬೇರೆ ಸ್ಥಾನಾಂತರವಿರುವುದಿಲ್ಲ. ರೋಗಾದಿಗಳಿಗೆ ಉಪಶಮನವೂ ದ್ರವ್ಯಾದಿಗಳ ಲಾಭವೂ ಉಂಟಾಗುತ್ತವೆ.

**ಚರರಾಶೌ ವಿಪರೀತಂ ಮಿಶ್ರಂ ವಾಚ್ಯಂ ದ್ವಿಮೂರ್ತ್ಯುದಯೇ ।**
**ಸ್ಥಿರವತ್ ಪ್ರಥಮೇಽರ್ಧೇ ಸ್ಯಾದಪರಂ ಚರರಾಶಿವತ್ ಸರ್ವಮ್ || 20 ||**

ಚರರಾಶಿಯಾದರೆ ಸ್ಥಿರರಾಶಿಯ ವಿರುದ್ಧ ಫಲ. ಉಭಯರಾಶಿಯಾದರೆ ಮಿಶ್ರಫಲ. ಉಭಯರಾಶಿಯ ಪೂರ್ವಾರ್ಧವಾದರೆ ಸ್ಥಿರರಾಶಿಯ ಫಲವೂ ಉತ್ತರಾರ್ಧವಾದರೆ ಚರರಾಶಿಯ ಫಲವೂ ಕಂಡುಬರುತ್ತದೆ.

## || ಫಲಕಾರಕತ್ವ ||

**ಅಧಿಪಃ ಸರ್ವಭಾವಾನಾಂ ಕಾರಕಃ ಪರಿಕೀರ್ತಿತಃ ।**
**ಕರ್ತಾ ಭಾವಗತಃ ಪ್ರೋಕ್ತಸ್ತಥಾ ತದ್ಭಾವವೀಕ್ಷಕಃ || 21 ||**

ಭಾವಾಧಿಪತಿಯು ಪ್ರತಿಯೊಂದು ಭಾವಕ್ಕೂ ಕಾರಕನಾಗಿರುತ್ತಾನೆ. ಭಾವದಲ್ಲಿರುವವನು ಅಥವಾ ಭಾವವನ್ನು ನೋಡುವವನು ಕರ್ತೃ ಆಗಿರುತ್ತಾನೆ.

**ಬಲಹೀನೇಽಥವಾ ಖೇಟೇ ದುಃಸ್ಥೇ ವಾ ಭಾವನಾಯಕೇ ।**
**ಭಾವಸ್ಯ ಸಂಪದಂ ಕರ್ತುಂ ನ ಶಕ್ಯಂ ಭಾವಮಾಶ್ರಿತೈಃ || 22 ||**

ಭಾವಾಧಿಪತಿಯು ಬಲಹೀನ ಅಥವಾ ದುಃಸ್ಥಾನದಲ್ಲಿದ್ದರೆ ಭಾವದಲ್ಲಿರುವ ಗ್ರಹಗಳಾಗಲೀ ಭಾವವನ್ನು ನೋಡುವ ಗ್ರಹರಾಗಲೀ ಭಾವಪುಷ್ಟಿಯನ್ನುಂಟು

ಮಾಡಲು ಸಮರ್ಥರಾಗುವುದಿಲ್ಲ ಭಾವಪುಷ್ಟಿ ಬರಬೇಕಾದರೆ ಭಾವಾಧಿಪತಿಯು ಬಲಿಷ್ಠನಾಗಿ, ಒಳ್ಳೆಯ ಭಾವದಲ್ಲಿರಬೇಕೆಂದು ತಾತ್ಪರ್ಯ.

**ಋಕ್ಷಾಂತೇ ಪುತ್ರನಾಶಃ ಸ್ಯಾತ್ ಮಾಸಾಂತೇ ತು ಧನಕ್ಷಯಃ ।**
**ವರ್ಷಾಂತೇ ವರ್ಗನಾಶಃ ಸ್ಯಾದ್ಗ್ರಹಣೇ ಸರ್ವನಾಶನಮ್ ॥ 23 ॥**

ನಕ್ಷತ್ರದ ಕೊನೆಯಾದರೆ ಸಂತತಿಹಾನಿ, ಮಾಸದ ಕೊನೆಯಾದರೆ ಧನಹಾನಿ, ವರ್ಷದ ಕೊನೆಯಾದರೆ ವರ್ಗನಾಶ, ಗ್ರಹಣಯೋಗವಿದ್ದರೆ ಸರ್ವನಾಶ

## ॥ ಸಮಯಫಲವಿಚಾರ ॥

**ಪಾತಾತ್ರಿಕಟುಕಂಪಥ್ಯಂ ಪಥ್ಯಾರಾತ್ರಿರಿತಿ ಕ್ರಮಾತ್ ।**
**ವಿಷದ್ರೇಕ್ಕಾಣಸಂಜ್ಞೋಽಯಂ ಸ್ವರ್ಣಪ್ರಶ್ನೇಽತಿನಿಂದಿತಃ ॥ 24 ॥**

ಮೇಷಾದಿ ರಾಶಿಗಳಿಗೆ 1, 2, 3, 1, 1, 1, 1, 1, 1, 1, 2, 2 –ಈ ಸಂಖ್ಯೆಯ ದ್ರೇಕ್ಕಾಣಗಳು ವಿಷದ್ರೇಕ್ಕಾಣಗಳಾಗಿರುತ್ತವೆ

**ಲಗ್ನೇ ವಾ ಯದಿ ಲಗ್ನಪೇ ವಿಷಘಟೀದ್ರೇಕ್ಕಾಣಸಂಸ್ಥೇ ವಿಷಾತ್**
**ಭೀತಿಃ ಸೋಷ್ಣಶಿಖೇಽಥ ದೇಹದಹನಂ ಜೂರ್ತ್ಯಾದಿ ಪಿತ್ತಾಮಯಾಃ ।**
**ಪಾತೋದ್ಬಂಧಭವ್ರೋ ಮೃತಿರ್ಭವನಕಾಲುಷ್ಯಂಚ ಸೈಕಾರ್ಗಲೇ**
**ತತ್ಕಾಲೋಡುಪತಿಕ್ರಿಯಾಫಲಮಪಿ ಪ್ರಷ್ಟುರ್ಬುಧೈರುಚ್ಯತಾಮ್ ॥ 25 ॥**

ಲಗ್ನ ಅಥವಾ ಲಗ್ನಾಧಿಪತಿಯು ವಿಷದ್ರೇಕ್ಕಾಣದಲ್ಲಿದ್ದರೆ ವಿಷಭಯವು; ಉಷ್ಣಶಿಖೆ ಇದ್ದರೆ ದೇಹದಹನ, ಜ್ವರಾದಿಗಳು, ಪಿತ್ತಸಂಬಂಧ ತೊಂದರೆಗಳು; ಏಕಾರ್ಗಳ ದೋಷವಿದ್ದರೆ ಪತನಭಯ, ಬಂಧನಭಯ, ಮೃತಿಭಯ, ಸ್ಥಾನದೋಷ ಗಳನ್ನು ಹೇಳಬೇಕು. ತತ್ಕಾಲ ಚಂದ್ರನಿಂದ ಚಂದ್ರಕ್ರಿಯಾ, ವೇಲಾ, ಅವಸ್ಥಾ ಫಲಗಳನ್ನು ಹೇಳಬೇಕು.

ಇದರಲ್ಲಿ ಬಂದಿರುವ ಉಷ್ಣಶಿಖೆ ಇತ್ಯಾದಿಗಳ ವಿವರಣೆ ಪ್ರಶ್ನಸಂಗ್ರಹ ಪೂರ್ವಾರ್ಧದಲ್ಲಿ ಬಂದಿದೆ. (8ನೆ ಅಧ್ಯಾಯ) ಚಂದ್ರಕ್ರಿಯಾವಸ್ಥಾವೇಲಾಫಲಗಳು ಇದೇ ಪುಸ್ತಕದ ಮುಹೂರ್ತಪ್ರಕರಣದಲ್ಲಿ ಬಂದಿದೆ. (ಸಂಜ್ಞಾಧ್ಯಾಯ)

**ಪ್ರಷ್ಟುಃ ಸ್ಯಾದ್ಗುಳಿಕೋದಯೇ ತು ಮರಣಂ ವಿಷ್ಟ್ಯಾಂ ತು ದುರ್ದೇವತಾ–**
**ಪೀಡಾಂ ಕಾರ್ಯವಿನಾಶನಂ ರಿಪುಭಯಂ ಗಂಡಾಂತಪಾದೇ ಪುನಃ ।**
**ರೋಗಸ್ಯಾಧಿಕವರ್ಧನಂ ವಿಷಮತಾಂ ಪಾತೇ ತು ಪಾತಂ ತಥಾ**
**ಸಾರ್ಪೇ ಶೀರ್ಷ್ಣಿ ಭುಜಂಗತೋಽಪಿ ಚ ಭಯಂ ಚೇತ್ಯಾದಿಶೇದ್ದೈವವಿತ್ ॥**
**॥ 26 ॥**

ಗುಳಿಕೋದಯವಾಗಿದ್ದರೆ ಮೃತಿಭಯ; ವಿಷ್ಟಿಯಾದರೆ ದುರ್ದೇವತಾಪೀಡೆ, ಕಾರ್ಯಹಾನಿ, ಶತ್ರುಭಯಗಳು; ಗಂಡಾಂತಪಾದವಾಗಿದ್ದರೆ ಅನಾರೋಗ್ಯ,

ವಿಷಮಸ್ವಭಾವಾದಿಗಳು; ಪಾತವಿದ್ದರೆ ಪತನ, ಸಾರ್ಪಮಸ್ತಕವಿದ್ದರೆ ಸರ್ಪಭಯ ಇತ್ಯಾದಿ ಫಲಗಳನ್ನು ಹೇಳಬೇಕು

ಸಾರ್ಪಮಸ್ತಕದ ಲಕ್ಷಣವನ್ನು ಪ್ರಶ್ನಸಂಗ್ರಹದಲ್ಲಿಯೂ ಗುಲಿಕಾದಿ ಲಕ್ಷಣವನ್ನು ಮುಹೂರ್ತಪ್ರಕರಣದಲ್ಲಿಯೂ (ಸಂಜ್ಞಾಧ್ಯಾಯ) ತಿಳಿಸಲಾಗಿದೆ

## ॥ ಮಂದಿರಗತಿ ವಿಚಾರ ॥

ಗೃಹಾಂತಿಕಂ ಪ್ರಷ್ಟುರಿಹಾಭಿಯಾತೇ ತತೋ ವಧೂಃ ಪ್ರಶ್ನವಿಚಾರಿಣೇತ್ಥಮ್ ।
ವಿನಿರ್ಗತಾ ಮೂಲಫಲೋಪಪನ್ನಾ ರಜಸ್ವಲೋನ್ಮೂಲವಿನಾಶಿನೀ ಸ್ಯಾತ್ ॥
॥ 27 ॥

ದೈವಜ್ಞನು ನಿಮಿತ್ತಚಿಂತನೆಯನ್ನು ಮಾಡುತ್ತಾ ಪ್ರಷ್ಟೃವಿನ ಮನೆಯ ಸಮೀಪಕ್ಕೆ ಬರುವಾಗ ಯಾರಾದರೂ ರಜಸ್ವಲೆಯಾದ ಸ್ತ್ರೀಯು ಮೂಲಫಲಗಳನ್ನು ಹಿಡಿದು ಕೊಂಡು ಹೊರಟಿದ್ದರೆ ಸಮೂಲನಾಶವಾಗುತ್ತದೆಂದು ಹೇಳಬೇಕು.

ಆರ್ತಾಲಯಂ ವಿಶತಿ ದೈವವಿದೀತ ಏತತ್
ದ್ವಾರಾ ನಿರೇತಿ ಯದಿ ಕೋಽಪಿ ಸ ರುಙ್ಮ್ರಿಯೇತ ।
ದ್ವಾರಾ ತಯೈವ ವಿಶತೀಹ ಯದೀತರಶ್ಚೇತ್
ಜೀವೇತ್ ಸ ನೂನಮಿತಿ ಮೇ ಗುರುಣೋಪದಿಷ್ಟಮ್ ॥ 28 ॥

ದೈವಜ್ಞನು ಪ್ರಷ್ಟೃವಿನ ಮನೆಯೊಳಗೆ ಹೋಗುವಾಗ ಅದೇ ಬಾಗಿಲಿನಿಂದ ಯಾರಾದರೂ ಹೊರಟರೆ ರೋಗಿಗೆ ಮೃತಿಭಯ. ಅದೇ ದಾರಿಯಿಂದ ಯಾರಾದರೂ ಒಳಹೋದರೆ ಖಂಡಿತವಾಗಿಯೂ ಆರೋಗ್ಯವು ಸಿದ್ಧಿಸುತ್ತದೆ.

ವಿಪ್ರಾಯಾನೇ ಬ್ರಹ್ಮರಕ್ಷೋನಿವಾಸ–
ಶ್ಚೋರೋತ್ಥಾಪದ್ದುರ್ಮತೇರಾಗಮೇನ ।
ದೂತಸ್ಯೈ ತತ್ ಸಂಭವೇದ್ಯದ್ದಿಶಾಯಾಮ್
ಪ್ರಷ್ಟುರ್ಧಾಮ್ನಸ್ತತ್ಫಲಂ ತದ್ದಿಶಿ ಸ್ಯಾತ್ ॥ 29 ॥

ಚಿಂತನೆ ಮಾಡುವಾಗ ಬ್ರಾಹ್ಮಣ ಬಂದರೆ ಬ್ರಹ್ಮರಕ್ಷಸ್ಸಿನ ನಿವಾಸವಿದೆ ಎಂದೂ ದುರ್ಬುದ್ಧಿಯವರು ಬಂದರೆ ಚೋರಭಯವುಂಟೆಂದೂ ಹೇಳಬೇಕು. ದೂತನಿಂದ ಯಾವ ದಿಕ್ಕಿನಲ್ಲಿ ಈ ಲಕ್ಷಣವು ಸಂಭವಿಸುತ್ತದೋ ಪ್ರಷ್ಟೃಗೃಹದಿಂದ ಅದೇ ದಿಕ್ಕಿನಲ್ಲಿ ಈ ಲಕ್ಷಣವಿದೆ ಎಂದು ಹೇಳಬೇಕು.

## ॥ ದೀಪಲಕ್ಷಣ ॥

ಸರ್ವಪ್ರಶ್ನೇಷು ಸರ್ವೇಷು ಕರ್ಮಸ್ವಪಿ ವಿಶೇಷತಃ ।
ಪ್ರಸಾದೇನೈವ ದೀಪಸ್ಯ ಭವಿಷ್ಯಚ್ಛುಭಮಾದಿಶೇತ್ ॥ 30 ॥

ಎಲ್ಲ ಕರ್ಮಗಳಲ್ಲಿಯೂ, ಎಲ್ಲ ಪ್ರಶ್ನೆಗಳಲ್ಲಿಯೂ ದೀಪದ ಪ್ರಸನ್ನತೆಯಿಂದಲೇ ಭವಿಷ್ಯತ್ಕಾಲವು ಶುಭಪ್ರದವೆಂದು ಹೇಳಬೇಕು.

ವಾಮಾವರ್ತೋ ಮಲಿನಕಿರಣಃ ಸಸ್ಫುಲಿಂಗೋಽಲ್ಪಮೂರ್ತಿಃ
ಕ್ಷಿಪ್ರಂ ನಾಶಂ ವ್ರಜತಿ ವಿಮಲಸ್ನೇಹವರ್ತ್ಯನ್ವಿತೋಽಪಿ ।
ದೀಪಃ ಪಾಪಂ ಕಥಯತಿ ಫಲಂ ಶಬ್ದವಾನ್ ವೇಪಥುಶ್ಚ
ವ್ಯಾಕೀರ್ಣಾರ್ಚಿರ್ವಿಮಲಮಸಕೃದ್ಯಶ್ಚ ನಾಶಂ ಪ್ರಯಾತಿ ॥ 31 ॥

ಎಡಕ್ಕೆ ತಿರುಗಿರುವ ದೀಪಜ್ವಾಲೆ, ಮಲಿನವಾದ ಪ್ರಕಾಶ, ಕಿಡಿ ಹಾರುವುದು, ಚಿಕ್ಕದಾಗಿರುವುದು, ಎಣ್ಣೆಬತ್ತಿ ಚೆನ್ನಾಗಿದ್ದರೂ ದೀಪ ನಾಶವಾಗುವುದು, ಶಬ್ದದೊಂದಿಗೆ ಜ್ವಾಲೆ, ಚಲನೆ, ಜ್ವಾಲೆಯಲ್ಲಿ ಸೀಳು, ಆಗಿಂದಾಗ್ಗೆ ನಂದಿಹೋಗುವುದು –ಇದು ಅಶುಭವನ್ನು ಸೂಚಿಸುತ್ತದೆ.

ದೀಪಃ ಸಂಹತಮೂರ್ತಿರಾಯತತನುರ್ನಿರ್ವೇಪಥುರ್ದೀಪ್ತಿಮಾನ್
ನಿಶ್ಶಬ್ದೋ ರುಚಿರಃ ಪ್ರದಕ್ಷಿಣಗತಿರ್ವೈಢೂರ್ಯಹೇಮದ್ಯುತಿಃ ।
ಲಕ್ಷ್ಮೀಂ ಕ್ಷಿಪ್ರಮಭಿವ್ಯನಕ್ತಿ ರುಚಿರಾಂ ಯಶ್ಚೋಚ್ಛ್ರಿತೋ ದೃಶ್ಯತೇ
ಶೇಷಂ ಲಕ್ಷಣಮಗ್ನಿಲಕ್ಷಣಸಮಂ ಯೋಜ್ಯಂ ಯಥಾ ಯುಕ್ತಿತಃ ॥ 32 ॥

ದೀಪವು ಉತ್ತಮ ರೀತಿಯಲ್ಲಿರುವುದು, ನಡುಕವಿಲ್ಲದಿರುವುದು, ದೀರ್ಘವಾಗಿರುವುದು, ಒಳ್ಳೆಯ ಪ್ರಕಾಶವಿರುವುದು, ಶಬ್ದವಿಲ್ಲದಿರುವುದು, ಕಾಂತಿಯುಕ್ತವಾಗಿರುವುದು, ಪ್ರದಕ್ಷಿಣೆಯಾಗಿ ಚಲನೆ, ವೈಢೂರ್ಯಸ್ವರ್ಣಗಳಂತೆ ಹೊಳೆಯುವುದು, ಜ್ವಾಲೆ ಊರ್ಧ್ವಮುಖವಾಗಿರುವುದು –ಒಳ್ಳೆಯ ಸಂಪತ್ತಿನ ಅಭಿವೃದ್ಧಿಯನ್ನು ಸೂಚಿಸುತ್ತದೆ.

ಸ್ನೇಹೋ ಯಸ್ಯೇಹ ದೇಹೋ ಭವತಿ ತದುದರೇ ವರ್ತಿನೀ ವರ್ತಿರಾತ್ಮಾ
ಜ್ವಾಲಾ ಚಾಯುಸ್ತದೀಯೇ ವಿಮಲಮಲಿನತೇ ಸೌಖ್ಯದುಃಖೇ ಕ್ರಮೇಣ ।
ಪಾತ್ರಂ ಗೇಹಂ ಸಮೀರೋ ಮೃದುಪರುಷಗುಣೋ ಬಂಧುಶತ್ರುಸ್ವರೂಪಃ
ಪ್ರಷ್ಟುಃ ಪ್ರಾಯೇಣ ವೃತ್ತಂ ಪಿಶುನಯತಿ ಮಹಾದೇವತಾತ್ಮಾ ಸ ದೀಪಃ ॥
॥ 33 ॥

ತುಪ್ಪವೇ ದೇಹ, ಅದರೊಳಗಿರುವ ಬತ್ತಿಯೇ ಆತ್ಮ, ಜ್ವಾಲೆಯೇ ಆಯುಸ್ಸು, ನಿರ್ಮಲತೆ ಕಲ್ಮಷಗಳೇ ಸುಖದುಃಖಗಳು, ದೀಪಪಾತ್ರವೇ ಮನೆ, ಮೃದುವಾಗಿರುವ ಚಲನೆ ಬಂಧುಗಳು. ಪರುಷವಾದ ಚಲನೆ ಶತ್ರುಗಳು –ಈ ರೀತಿ ದೀಪವು ಪ್ರಷ್ಟುವಿನ ಎಲ್ಲಾ ಗುಣದೋಷಗಳನ್ನು ಸೂಚಿಸುತ್ತದೆ.

ಪೂರ್ವಾಭಿಪ್ರೇತದಾತ್ರೀ ಶಿಖಿನಿ ಶಿಖಿಭಯಂ ದಕ್ಷಿಣೇ ಪ್ರಾಣಹಾನಿಃ
ನೈರ್ಋತ್ಯಾಂ ವಿಸ್ಮೃತಿಃ ಸ್ಯಾದ್ವರುಣದಿಶಿಶಿಖಾ ಶಾಂತಿದಾ ವಾಯುಕೋಣೇ ।
ಶೂನ್ಯಾ ಮೃತ್ಯುಂಜಯೀ ಸ್ಯಾದ್ಧನದದಿಶಿ ಶಿಖಾ ಶಂ ವಿಧತ್ತೇ ಶಿವಾಖ್ಯೇ
ವಹ್ನೇರೂರ್ಧ್ವಾ ಶಿಖೈಷಾ ವಿತರತಿ ವಪುಷೋಽಭೀಷ್ಟವಸ್ತೂನಿ ಸದ್ಯಃ ॥ 34 ॥

ದೀಪದ ಚಲನೆ ಪೂರ್ವಕ್ಕಿದ್ದರೆ ಇಷ್ಟಾರ್ಥಸಿದ್ಧಿಯುಂಟಾಗುತ್ತದೆ. ಆಗ್ನೇಯಕ್ಕಾದರೆ ಅಗ್ನಿಭಯ, ದಕ್ಷಿಣಕ್ಕಾದರೆ ಮೃತಿಭಯ, ನೈರ್ಋತ್ಯದಲ್ಲಿ ಅಪಸ್ಮಾರಭಯ, ಪಶ್ಚಿಮದಲ್ಲಿ ಶುಭ, ವಾಯವ್ಯದಲ್ಲಿ ನಾಶ, ಉತ್ತರದಲ್ಲಿ ಆಯುಷ್ಯವೃದ್ಧಿ, ಈಶಾನ್ಯದಲ್ಲಿ ಕ್ಷೇಮ, ಊರ್ಧ್ವಕ್ಕೆ ಶಿಖೆ ಇದ್ದರೆ ಬೇಗನೆ ಸಂಪೂರ್ಣ ಅಭಿವೃದ್ಧಿ.

ಚತುರಂಗುಲಿಕಾ ಶ್ರೇಷ್ಠಾ ತ್ರ್ಯಂಗುಲಾ ಮಧ್ಯಮಾ ಮತಾ ।
ದ್ವ್ಯಂಗುಲಾ ತ್ವಧಮಾ ಜ್ಞೇಯಾ ತನ್ನ್ಯೂನಾ ನ ಶುಭಪ್ರದಾ ॥ 35 ॥

ದೀಪದ ಜ್ವಾಲೆಯ ಎತ್ತರ 4 ಅಂಗುಲವಿದ್ದರೆ ಉತ್ತಮ. 3 ಅಂಗುಲವಿದ್ದರೆ ಮಧ್ಯಮ. 2 ಅಂಗುಲವಿದ್ದರೆ ಅಧಮ. ಅದಕ್ಕಿಂತ ಕಡಿಮೆ ಇರುವುದು ಶುಭವಲ್ಲ.

ಜ್ವಾಲಾದ್ವಯೇ ತು ಸಂಪ್ರಾಪ್ತೇ ಭಿನ್ನೋ ದೇವಸ್ಯ ಮೂರ್ಧನಿ ।
ಕಿರೀಟಾದಿ ವಿನಾಶಂ ವಾ ಭೇದನಂ ವಾ ವದೇದ್ಬುಧಃ ॥ 36 ॥

2 ಜ್ವಾಲೆ ಬಂದರೆ ದೇವರ ಶಿರೋಭಾಗಕ್ಕೆ ಭಿನ್ನತೆ ಬಂದಿದೆ. ಕಿರೀಟಾದಿನಾಶ ಅಥವಾ ಭೇದನ ಉಂಟಾಗಿದೆ.

## ॥ ರೇಖಾವಿಷಯ ॥

ಸ್ಥೂಲರೇಖಾ ಸುಖಕರೀ ಸೂಕ್ಷ್ಮಾ ದುಃಖಪ್ರದಾಯಿನೀ ।
ರೇಖಾಚ್ಛೇದೋ ಭವೇತ್ ಪ್ರಷ್ಟುಃ ಸುಖಕಾರ್ಯವಿಘಾತಕಃ ॥ 37 ॥

ಸ್ಥೂಲರೇಖೆ ಸುಖಪ್ರದ. ಸೂಕ್ಷ್ಮವು ದುಃಖಪ್ರದ. ರೇಖಾಚ್ಛೇದ ಉಂಟಾಗಿದ್ದರೆ ಸುಖಕಾರ್ಯಹಾನಿ.

ಲಿಖಿತಾ ಸೌಮ್ಯರೇಖಾ ಪ್ರಾಗ್ಯದಿ ನೂನಂ ಧನಾಗಮಃ ।
ವಾರುಣೀ ಯದಿ ರೋಗಾಪ್ತಿರೈಂದ್ರೀ ಚೇತ್ ಸಂತತಿರ್ಭವೇತ್ ॥ 38 ॥

ಉತ್ತರರೇಖೆಯನ್ನು ಮೊದಲು ಬರೆದರೆ ಧನಲಾಭ, ಪಶ್ಚಿಮರೇಖೆ ಮೊದಲಾದರೆ ಅಸೌಖ್ಯ, ಪೂರ್ವರೇಖೆಯಾದರೆ ಸಂತತಿಲಾಭ.

ಯಾಮ್ಯರೇಖಾ ಯದಿ ಭವೇನ್ಮರಣಾಯ್ವೈವ ಪೃಚ್ಛತಾಮ್ ॥ 39 ॥

ದಕ್ಷಿಣರೇಖೆಯನ್ನು ಮೊದಲು ಬರೆದರೆ ಮರಣಭಯ ಫಲ.

ಚಕ್ರಸ್ಯ ಯತ್ರ ನಿಮ್ನತ್ವಮೌನ್ನತ್ಯಂ ವಾಽಪಿ ದೃಶ್ಯತೇ ।
ಪ್ರಷ್ಟುರ್ನಿವಾಸಭೂಮಿಶ್ಚ ತತ್ರ ತತ್ರ ನತೋನ್ನತಾ ॥ 40 ॥

ಚಕ್ರದ ಎತ್ತರ ತಗ್ಗು ಯಾವ ಯಾವ ದಿಕ್ಕಿನಲ್ಲಿದೆಯೋ ಆಯಾ ದಿಕ್ಕಿನಲ್ಲಿ ಪ್ರಷ್ಟುವಿನ ವಾಸಿಸುವ ಭೂಮಿಯೂ ಎತ್ತರತಗ್ಗಿನಲ್ಲಿರುತ್ತದೆ.

ರೇಖಾಕರ್ತ್ರಾ ಸ್ಪೃಷ್ಟಮಂಗಂ ಸ್ಪೃಷ್ಟಾಂಗಮಿತಿ ಕಥ್ಯತೇ ॥ 41 ॥

ರೇಖೆ ಬರೆದವರು ಯಾವ ಅಂಗವನ್ನು ಮುಟ್ಟುತ್ತಾರೋ ಅದು ಸ್ಪೃಷ್ಟಾಂಗವೆಂದು ತಿಳಿಯಬೇಕು.

**ದೃಶ್ಯಂತೇ ದಿಶಿ ಯತ್ರ ಯತ್ರ ಮನುಜಾ ದೂತಸ್ಯ ವಿಷ್ವಕ್ ಸ್ಥಿತಾಃ**
**ದಿಕ್ಷ್ವಾಸ್ವಾಸು ಗೃಹಾಣಿ ಸಂತಿ ಸದೃಶಂ ಜಾತ್ಯಾ ಚ ತೈಃ ಸಂಖ್ಯಯಾ ।**
**ಆಯಾನೇನ ಧನುಷ್ಮತೋಽತ್ರ ಹರಿತಿ ಸ್ಥಾನಂ ಚ ಶಾಸ್ತುರ್ವದೇತ್**
**ದೇವ್ಯಾಸ್ತದ್ದಿಶಿ ಯೋಷಿತಃ ಕುಪೃಥುಕಾಽಽಯಾನೇ ಪಿಶಾಚಸ್ಥಿತಿಃ ॥ 42 ॥**

ದೂತನ ಸುತ್ತಮುತ್ತ ಎಲ್ಲಿ ಎಲ್ಲ ಜನರಿದ್ದಾರೋ ಪ್ರಷ್ಟೃಗೃಹದಿಂದ ಆಯಾ ದಿಕ್ಕುಗಳಲ್ಲಿ ಅಷ್ಟೇ ಸಂಖ್ಯೆಯ ಮನೆಗಳಿರುತ್ತವೆ. ಆಯುಧಧಾರಿಯಾದ ಒಬ್ಬ ವ್ಯಕ್ತಿ ಯಾವ ದಿಕ್ಕಿನಲ್ಲಿ ಬರುತ್ತಾನೋ ಆ ದಿಕ್ಕಿನಲ್ಲಿ ಶಾಸ್ತೃವಿನಂತಹ ದೇವತೆಗಳ ಸ್ಥಾನವಿರುವುದಾಗಿ ಹೇಳಬೇಕು. ಸ್ತ್ರೀಯು ಬಂದರೆ ಬಂದ ದಿಕ್ಕಿನಲ್ಲಿ ದೇವಿಯ ಸ್ಥಾನವೂ, ತುಂಟ ಹುಡುಗ ಬಂದರೆ ಆ ದಿಕ್ಕಿನಲ್ಲಿ ಪಿಶಾಚಾದಿಸ್ಥಿತಿ ಇದೆ ಎಂದು ಹೇಳಬೇಕು.

ದೇವಪ್ರಶ್ನೆಯಲ್ಲಿ ದೀಪರೇಖಾದಿಲಕ್ಷಣಗಳನ್ನು ಯುಕ್ತಿಗನುಸಾರವಾಗಿ ಸ್ವಲ್ಪ ಬದಲಿಸಿ ಹೇಳತಕ್ಕದ್ದು.

## ॥ ಪ್ರಾಣಾದಿ ಫಲಗಳು ॥

**ಲಗ್ನೇಂದೂ ಮಾನ ದಾನಾಭ್ಯಾಮಿತ್ಯುಕ್ತಾನಾಮಥೋ ಫಲಮ್ ।**
**ಪ್ರಾಣಮೃತ್ಯುಶರೀರಾಣಾಮಧುನಾ ಸಮುದೀರ್ಯತೇ ॥ 43 ॥**

ಲಗ್ನೇಂದೂ ಮಾನದಾನಾಭ್ಯಾಂ (ಪ್ರಶ್ನಸಂಗ್ರಹ 9–39/40) ಎಂಬ ಶ್ಲೋಕಗಳಲ್ಲಿ ಹೇಳಿದ ಪ್ರಾಣಮೃತ್ಯುಶರೀರ ಸ್ಫುಟಗಳ ಫಲವನ್ನು ಇಲ್ಲಿ ತಿಳಿಸಿದೆ.

**ಪ್ರಾಣಮೃತ್ಯುಶರೀರೇಷು ದೇಹಾಧಿಕ್ಯೇ ರುಜಾಂ ಶಮಃ ।**
**ಪ್ರಾಣೇಽಧಿಕೇ ಮಹಾನ್ರೋಗಃ ಮೃತ್ಯುಶ್ಚೇದಧಿಕೋ ಮೃತಿಃ ॥ 44 ॥**

ಪ್ರಾಣ ಮೃತ್ಯು ಶರೀರಗಳಲ್ಲಿ ದೇಹಸ್ಫುಟವು ಹೆಚ್ಚಾಗಿದ್ದರೆ ಆರೋಗ್ಯಲಾಭ, ಪ್ರಾಣ ಹೆಚ್ಚಾಗಿದ್ದರೆ ಅಸೌಖ್ಯ, ಮೃತ್ಯು ಹೆಚ್ಚಾಗಿದ್ದರೆ ಮರಣಭಯ.

**ಮೃತ್ಯೌ ಜ್ಯೇಷ್ಠಾಽಹಿ ಪೌಷ್ಣಸ್ಥೇ ಜನ್ಮಭಸ್ಥೇ ಚ ಪಂಚತಾ ।**
**ಮೃತ್ಯುಃ ಪ್ರಾಣಶ್ಚ ದೇಹಶ್ಚ ಕ್ರಮವೃದ್ಧಾಃ ಶುಭಪ್ರದಾಃ ॥ 45 ॥**

ಮೃತ್ಯುಸ್ಫುಟವು ಜನ್ಮನಕ್ಷತ್ರ ಆಶ್ಲೇಷಾ ಜ್ಯೇಷ್ಠಾ ರೇವತಿಗಳಲ್ಲಿದ್ದರೆ ಮರಣಭಯ. ಮೃತ್ಯುಪ್ರಾಣದೇಹಗಳು ಅನುಕ್ರಮವಾಗಿ ವೃದ್ಧಿಯಲ್ಲಿದ್ದರೆ ಶುಭ.

## ॥ ಮನುಷ್ಯಾಲಯಾದಿ ॥

**ಮಿಥುನಂ ಚ ಧನುಃ ಕನ್ಯಾ ಸಾಮಾನ್ಯೋ ಮಾನುಷಾಲಯಃ ।**
**ಗ್ರಾಮೋ ವಾ ನಗರೇ ವಾ ಸ್ಯಾತ್ತುಲಾಕುಂಭಧರೋ ಧನುಃ ॥ 46 ॥**

ಮಿಥುನ ಕನ್ಯಾ ಧನುಗಳು ಸಾಮಾನ್ಯವಾಗಿ ಮನುಷ್ಯಾಲಯಗಳು. ತುಲಾ ಧನು ಕುಂಭಗಳು ಗ್ರಾಮನಗರಗಳಲ್ಲಿರುತ್ತವೆ. ಉಳಿದ ರಾಶಿಗಳು ವನ, ಜಲಪ್ರದೇಶಾದಿಗಳಲ್ಲಿರುತ್ತವೆ.

## ॥ ಬ್ರಹ್ಮರಕ್ಷೋಬಾಧಾವಿಚಾರ ॥

ಬಾಧರ್ಕ್ಷೇಶೇ ಚ ಜೀವೇ ಯದಿ ಭೃಗುತನಯೋ ಬಾಧಕಾರೂಢಸಂಸ್ಥೇ
ಭೂಪುತ್ರೇ ಭಾನುಪುತ್ರೇ ನಿಧನಪತಿಯುತಾವೇಕ್ಷಿತೇ ವಾತ್ರಸಂಸ್ಥೇ ।
ಜೀವರ್ಕ್ಷೇ ಪಾಪ ಏವಾಪ್ಯಥ ಖರಭವನೇ ಜೀವ ಏವ ತ್ರಿಕೋಣೇ
ಬಾಧಾಯಾಂ ಬ್ರಹ್ಮರಕ್ಷಸ್ತ್ವಖಿಲಸುಖಸುತಚ್ಛೇದನಂ ವಾ ವಿದಧ್ಯಾತ್ ॥ 47 ॥

ಗುರು ಅಥವಾ ಶುಕ್ರನು ಬಾಧಕಾಧಿಪತಿಯಾಗಿ ಅನಿಷ್ಟಸ್ಥಾನದಲ್ಲಿರುವುದು, ಬಾಧಕಸ್ಥಾನದಲ್ಲಿರುವುದು, ಕುಜ ಅಥವಾ ಶನಿ ಅಷ್ಟಮಾಧಿಪತಿಯ ಯೋಗದೃಷ್ಟಿಗಳೊಂದಿಗೆ ಬಾಧಕಸ್ಥಾನದಲ್ಲಿರುವುದು, ಗುರುಕ್ಷೇತ್ರವು ತ್ರಿಕೋಣವಾಗಿದ್ದು ಅಲ್ಲಿ ಪಾಪಗ್ರಹವಿರುವುದು ಅಥವಾ ತ್ರಿಕೋಣದಲ್ಲಿ ಅಥವಾ ಬಾಧಕಸ್ಥಾನದಲ್ಲಿ ಗುರುವು ಪಾಪಕ್ಷೇತ್ರದಲ್ಲಿರುವುದು –ಈ ಲಕ್ಷಣಗಳು ಬಂದರೆ ಸರ್ವವಿಧ ಸುಖಹಾನಿ, ಪುತ್ರಾದಿ ಹಾನಿ ಇತ್ಯಾದಿ ದೋಷಫಲಗಳನ್ನು ಬ್ರಹ್ಮರಕ್ಷಸ್ಸು ಉಂಟುಮಾಡುತ್ತದೆಯೆಂದು ಹೇಳಬೇಕು.

ಸಪ್ತಾಹಶ್ರವಣಂ ಚೈವ ಸೇತೌ ಸ್ನಾನಂ ಚ ಸಾಗರೇ ।
ಬ್ರಾಹ್ಮಣಾನಾಂ ಚ ಭುಕ್ತಿಶ್ಚ ಸ್ತ್ರೀಕುಮಾರ ಸಮರ್ಚನಮ್ ॥ 48 ॥
ಬ್ರಹ್ಮಹತ್ಯಾದಿದೋಷಘ್ನಂ ಬ್ರಹ್ಮರಕ್ಷೋ ವಿಮುಕ್ತಿದಮ್ ॥ 49 ॥

ಭಾಗವತಸಪ್ತಾಹ, ಸೇತುಸ್ನಾನ, ಸಮುದ್ರಸ್ನಾನ, ಸ್ತ್ರೀಕುಮಾರ–ಬ್ರಾಹ್ಮಣಾರಾಧನೆ ಮಾಡಿದರೆ ಬ್ರಹ್ಮಹತ್ಯಾದಿ ದೋಷಗಳು ಪರಿಹಾರವಾಗುತ್ತವೆ. ಬ್ರಹ್ಮರಕ್ಷಸ್ಸಿಗೆ ಮುಕ್ತಿಯು ಸಿಗುತ್ತದೆ.

## ॥ ಷಟ್ಚಕ್ರ ಷಡಾಧಾರಾದಿ ಚಿಂತನೆ ॥

ಮೂಲಾಧಾರೋ ದೃಗಾಣಃ ಸ್ಯಾತ್ ಪಿತೃಚಿಂತಾ ರವಿಸ್ತಥಾ ।
ಸ್ವಾಧಿಷ್ಠಾನೇ ತು ಹೋರಾ ಸ್ಯಾನ್ಮಾತೃಚಿಂತಾ ತಥಾ ಶಶೀ ॥ 50 ॥

ಮಣಿಪೂರೇ ನವಾಂಶಶ್ಚ ಭ್ರಾತೃಚಿಂತಾ ಕುಜೋಽಪಿ ಚ ।
ಅನಾಹತೇ ಚ ತ್ರಿಂಶಾಂಶೋ ವಾಣೀಚಿಂತಾ ಬುಧಸ್ತಥಾ ॥ 51 ॥

ವಿಶುದ್ಧೌ ದ್ವಾದಶಾಂಶಃ ಸ್ಯಾತ್ ಪುತ್ರಚಿಂತಾ ತಥಾ ಗುರುಃ ।
ಆಜ್ಞಾಯಾಂ ಕ್ಷೇತ್ರಮುದ್ದಿಷ್ಟಂ ಜಾಯಾಚಿಂತಾ ಸಿತಸ್ತಥಾ ॥ 52 ॥

ದ್ವಾದಶಾಂಶೇ ಶನೈಶ್ಚಾರೀ ನಾಶಚಿಂತಾ ಚ ಕೀರ್ತಿತಾ ।
ತತ್ರಸ್ಥೈಸ್ತದಧೀಶೈಶ್ಚ ಬಲಾಬಲವಶಾತ್ ಫಲಮ್ ॥ 53 ॥

ದ್ರೇಕ್ಕಾಣದಿಂದ ಹಾಗೂ ರವಿಯಿಂದ ಮೂಲಾಧಾರಚಕ್ರ, ಪಿತೃ, ದೇವಾಲಯದ ಆಧಾರ ಶಿಲೆಗಳನ್ನು, ಹೋರೆಯಿಂದ ಹಾಗೂ ಚಂದ್ರನಿಂದ ಸ್ವಾಧಿಷ್ಠಾನ, ಮಾತೃನಿಧಿಕುಂಭ, ನವಾಂಶದಿಂದ ಕುಜನಿಂದ ಮಣಿಪೂರಚಕ್ರ, ಭ್ರಾತೃ, ಅಧೋಭಾಗದಲ್ಲಿ ಸ್ಥಾಪಿಸಿದ ಪದ್ಮಗಳನ್ನು ತ್ರಿಶಾಂಶ–ಬುಧರಿಂದ ಅನಾಹತಚಕ್ರ, ಮಾತು, ವಿದ್ಯೆ, ಕೂರ್ಮಗಳನ್ನು, ದ್ವಾದಶಾಂಶ ಹಾಗೂ ಗುರುವಿನಿಂದ ವಿಶುದ್ಧಿಚಕ್ರ, ಪುತ್ರಾದಿ ವಿಚಾರ, ನಾಲಗಳನ್ನು ಕ್ಷೇತ್ರ ಹಾಗೂ ಶುಕ್ರನಿಂದ ಆಜ್ಞಾಚಕ್ರ, ಪತ್ನಿ, ನಪುಂಸಕ ಶಿಲೆಗಳನ್ನು, ದ್ವಾದಶಾಂಶ ಮತ್ತು ಶನಿಯಿಂದ ನಾಶಚಿಂತನೆ. ಆಯಾ ಷಡ್ವರ್ಗದಲ್ಲಿರುವವರು, ಅವುಗಳ ಅಧಿಪತಿಗಳು, ಆಯಾ ಗ್ರಹರ ಬಲಾಬಲಗಳು –ಇವೆಲ್ಲದರಿಂದ ಷಡಾಧಾರಗಳು, ಆಶ್ರಯದಾತ ದೇವತೆಗಳು, ಸಹದೇವತೆಗಳು, ಉಪದೇವತೆಗಳ ವಿಶೇಷ ಚಿಂತನೆ ಮಾಡಬೇಕು.

## ॥ ಸಾನ್ನಿಧ್ಯಾದಿ ಭಾವಕಾರಕತ್ವ ॥

**ಸಾನ್ನಿಧ್ಯವಿತ್ತಪರಿಚಾರಕವಾಹಬಿಂಬ**
**ವಿದ್ವೇಷಿ ಭೂಷಣ ನಿವೇದ್ಯಪದಾರ್ಥಭೇದಾಃ ।**
**ಕ್ಷೇತ್ರಾಧಿಪ ಪ್ರಥಿತ ಕರ್ಮಧನಾಗಮಾರ್ಥ–**
**ನಾಶಾದಯಃ ಖಲು ವಿಲಗ್ನಮುಖಾ ಹಿ ಭಾವಾಃ ॥ 54 ॥**

ಲಗ್ನಾದಿಭಾವಗಳು ಕ್ರಮವಾಗಿ ಸಾನ್ನಿಧ್ಯ, ಧನ, ಪರಿಚಾರಕ ವಾಹನ, ಬಿಂಬ, ಶತ್ರು, ಆಭರಣ, ನಿವೇದ್ಯಾದಿ ದ್ರವ್ಯಗಳು, ಕ್ಷೇತ್ರೇಶರು, ಉತ್ಸವಾದಿಕರ್ಮಗಳು, ಧನಾಗಮ, ಧನಹಾನಿಗಳನ್ನು ಸೂಚಿಸುತ್ತವೆ.

**ಪಂಚಮಂ ಮಂತ್ರಸಾನ್ನಿಧ್ಯಮಷ್ಟಮಂ ಚ ನಿವೇದ್ಯತಾ ।**
**ಸಾನ್ನಿಧ್ಯ ದ್ವಿತಯಾದ್ಬಿಂಬೇ ಸರ್ವೋತ್ಕೃಷ್ಟದ್ಯುತಿರ್ಭವೇತ್ ॥ 55 ॥**

ಪಂಚಮದಿಂದ ಮಂತ್ರಸಾನ್ನಿಧ್ಯವನ್ನೂ ಅಷ್ಟಮದಿಂದ ನಿವೇದ್ಯಸಾನ್ನಿಧ್ಯವನ್ನೂ ಚಿಂತಿಸಬೇಕು. ಈ ಎರಡು ಸಾನ್ನಿಧ್ಯಗಳೂ ಚೆನ್ನಾಗಿದ್ದು ಬಿಂಬಭಾವವೂ ಚೆನ್ನಾಗಿದ್ದರೆ ಅತ್ಯುತ್ತಮ ಸಾನ್ನಿಧ್ಯವಿದೆ ಎಂದು ಹೇಳಬೇಕು.

## ॥ ಭಾವಚಿಂತನೆ ॥

**ಪಾಪಾನಾಮುದಯಾದಯೋऽಸ್ತಭವನೇ ಧರ್ಮೇऽಥವಾ ಕರ್ಮಭೇ**
**ಕ್ಷೇತ್ರೇಶಾಃ ಪ್ರತಿಪತ್ತಿಹೀನಮತಯಸ್ತಸ್ಮಾದಿತಿ ಪ್ರೋಚ್ಯತಾಮ್ ।**
**ಯೋಗೇಷ್ವೇಷು ಸಮಾಶ್ರಿತೇ ಕ್ಷಿತಿಸುತೇ ದೇವೋತ್ಸವ ಧ್ವಂಸನಂ**
**ದುರ್ವಾದಂ ಕಲಹಂ ತಥೋತ್ಸವವಿಧೌ ದೇವಕ್ರುಧಾಭೂದಿತಿ ॥ 56 ॥**

ಸಪ್ತಮ ನವಮದಶಮಗಳಲ್ಲಿ ಪಾಪೋದಯ ಪಾಪದೃಷ್ಟಿಗಳಿದ್ದರೆ ಕ್ಷೇತ್ರೇಶರು, ರಕ್ಷಕರು, ಜನಪದಸ್ಥರು, ಪರಿಚಾರಕವರ್ಗದವರು, ವಿನಯ ವಿವೇಕಾದಿಗಳಿಲ್ಲದವರು, ತಿಳಿವಳಿಕೆ ಇಲ್ಲದವರು ಎಂದು ಹೇಳಬೇಕು. ಈ ಯೋಗಗಳಲ್ಲಿ ಕುಜದೃಷ್ಟಿ

ಯೋಗಾದಿಗಳಿದ್ದರೆ ದೇವೋತ್ಸವಕ್ಕೆ ಹಾನಿ. ಅನಗತ್ಯವಾದ ವಿವಾದ, ಕಲಹ ಇತ್ಯಾದಿಗಳಿಂದ ದೇವಕೋಪ ಉಂಟಾಗಿದೆಯೆಂದು ಹೇಳಬೇಕು.

**ಸಂಹಾರೋಡುಗತೇ ಕುಜೇಽಸ್ತನವಮಾಪತ್ಯಸ್ಥಿತೇ ವಾ ಯದಿ**
**ಕ್ಷೇತ್ರೇಶಾದಿಷು ವೈರದೋಷವಶತಃ ದೀಪಕ್ಷತಿಂ ನಿರ್ದಿಶೇತ್ ।**
**ಯೋಗೇಽಸ್ಮಿನ್ ಶನಿವರ್ಗಗೋ ಯದಿ ಕುಜೋ ಮಾಂದ್ಯಾಶ್ರಿತೋ ವಾ ಯದಿ**
**ಕ್ಷೇತ್ರೇ ಗೋಪುರದಾಹಕೃತ್ಯಮರಿಣಾಽನಿಷ್ಟಪ್ರದಂ ನಿರ್ದಿಶೇತ್ ॥ 57 ॥**

ಕುಜನು ಸಂಹಾರ ನಕ್ಷತ್ರದಲ್ಲಿದ್ದು ಪಂಚಮ ಸಪ್ತಮ ನವಮಗಳಲ್ಲಿದ್ದರೆ ಕ್ಷೇತ್ರೇಶಾದಿಗಳಲ್ಲಿ ವೈರವು. ಅದರಿಂದಾಗಿ ದೇವರ ದೀಪಾದಿ ಸೇವಾಕಾರ್ಯಗಳಿಗೆ ಹಾನಿ ಉಂಟಾಗಿರುತ್ತದೆ. ಈ ಯೋಗದಲ್ಲಿ ಕುಜನಿಗೆ ಶನಿವರ್ಗ ಅಥವಾ ಮಾಂದಿ ಯೋಗವಿದ್ದರೆ ಕ್ಷೇತ್ರದಲ್ಲಿ ಶತ್ರುಗಳಿಂದಾಗಿ ಅಗ್ನಿಭಯ, ಗೋಪುರದಾಹಾದಿಗಳು ಸಂಭವಿಸಿವೆ ಎಂದು ಹೇಳಬೇಕು.

**ಗುಳಿಕೇ ಕೇಂದ್ರಗೇ ರಾಹುಭೌಮಾದಿಯುತ ವೀಕ್ಷಿತೇ ।**
**ರಕ್ತಸ್ರಾವಾನ್ಮೃತಿಃ ಕ್ಷೇತ್ರೇ ಹ್ಯಪಮೃತ್ಯುಭಯಂ ತು ವಾ ॥ 58 ॥**

ಗುಳಿಕನಿಗೆ ಕೇಂದ್ರದಲ್ಲಿ ರಾಹುಕುಜಾದಿಗಳ ಯೋಗದೃಷ್ಟಿಗಳಿದ್ದರೆ ಕ್ಷೇತ್ರದಲ್ಲಿ ರಕ್ತಸ್ರಾವ, ಮೃತ್ಯುಭಯ, ಅಪಮೃತ್ಯು ಇದೆಯೆಂದು ಹೇಳಬೇಕು.

**ಭಾವೇಷು ಲಗ್ನಾದಿಷು ಯತ್ರ ಸೌಮ್ಯಾಃ ತದುಕ್ತ ಸಾನ್ನಿಧ್ಯಮುಖಾಭಿವೃದ್ಧಿಃ ।**
**ಪಾಪಸ್ಥಿತಿರ್ಯತ್ರ ತದೀಕ್ಷಣಾನಾಂ ವಾಚ್ಯೈವ ಹಾನಿರ್ಬಹುದೂಷಣಂ ವಾ ॥**
**॥ 59 ॥**

ಲಗ್ನಾದಿ ಭಾವಗಳಲ್ಲಿ ಶುಭಗ್ರಹಯೋಗದೃಷ್ಟಿ ವರ್ಗಗಳಿದ್ದರೆ ಆಯಾ ಭಾವಗಳಿಗೆ ಅಭಿವೃದ್ಧಿ ಇದೆಯೆಂದು ಹೇಳಬೇಕು. ಪಾಪಸಂಬಂಧ, ದುಃಸ್ಥಾನಾಧಿಪತಿ ಸಂಬಂಧವಿದ್ದರೆ ಬಹುದೋಷ ಹಾನಿಗಳು ಕಂಡುಬರುತ್ತವೆ.

**ದೇವಾನುಕೂಲ್ಯಾದಿ ನಿರೂಪಣೇ ಪ್ರಾಕ್**
**ಪ್ರೋಕ್ತಂ ಹಿ ಯುಕ್ತ್ಯಾತ್ರ ತು ಯೋಜನೀಯಮ್ ।**
**ಸಂಪತ್ಕರೀ ದೃಷ್ಟ ಇಹಾರ್ಥನಾಶೇ**
**ಕ್ರಿಯಾಽಶುಚೌ ಶುದ್ಧಿಕರೀ ವಿಧೇಯಾ ॥ 60 ॥**

ದೇವಾನುಕೂಲ್ಯಾದಿ ನಿರೂಪಣದಲ್ಲಿ (ಪ್ರಶ್ನಸಂಗ್ರಹ 14, 15ನೆ ಅಧ್ಯಾಯ, ಪ್ರಶ್ನಮಾರ್ಗ 15ನೆ ಅಧ್ಯಾಯ) ಮೊದಲು ಹೇಳಿದ್ದೆಲ್ಲವನ್ನೂ ಯುಕ್ತಿಯಿಂದ ಯೋಚಿಸಿ ಫಲ ಹೇಳಬೇಕು. ಆರ್ಥಿಕ ತೊಂದರೆ ಇತ್ಯಾದಿ ಸಂಭವಿಸಿದ್ದರೆ ಸಂಪತ್ಕರ ಕರ್ಮಗಳನ್ನೂ ಅಶುದ್ಧ್ಯಾದಿ ಸಂಭವಿಸಿದ್ದರೆ ಶುದ್ಧಿಕರ ಕರ್ಮಗಳನ್ನೂ ಮಾಡಬೇಕು.

**ದೇವೀ ನಿಷೇವಾ ಗಣನಾಥಹೋಮ ಭಾಗ್ಯೈಕಮತ್ಯಪ್ರದಸೂಕ್ತ ಜಾಪಾಃ ।**
**ಆಪನ್ನಿವೃತ್ತ್ಯೈ ಧನಧಾನ್ಯವೃದ್ಧ್ಯೈ ಗವ್ಯಾಭಿಷೇಕಾದಿಕಮತ್ರ ಶುದ್ಧ್ಯೈ ॥ 61 ॥**

ದೇವೀಸೇವನೆ, ಗಣಪತಿಹೋಮ, ಭಾಗ್ಯಸೂಕ್ತ, ಐಕಮತ್ಯಸೂಕ್ತಗಳ ಜಪಗಳನ್ನು ಆಪತ್‌ಪರಿಹಾರ, ಧನಧಾನ್ಯಸಮೃದ್ಧಿ, ಐಕಮತ್ಯಪ್ರಾಪ್ತಿಗಾಗಿ ಮಾಡಬೇಕು. ಶುದ್ಧಿಗೋಸ್ಕರ ಮೊದಲು ಪಂಚಗವ್ಯ ಪುಣ್ಯಾಹ, ಕಲಶಾಭಿಷೇಕಾದಿಗಳನ್ನು ನಡೆಸಬೇಕು.

ಉಚ್ಚಸ್ಥೇ ದೇವಾನಾಂ ಸ್ವಗೇಹಮಿತ್ರಸ್ಥಿತೇ ನೃಣಾಮ್ ।
ನೀಚಸ್ಥೇ ನಾರಕಿಣಾಂ ಚಿಂತಾ ಕಾರ್ಯೇತಿ ಮಾಧವೋ ವದತಿ ॥ 62 ॥

ಪ್ರಶ್ನಕುಂಡಲಿಯಲ್ಲಿ ಉಚ್ಚ ಷಡ್ವರ್ಗದಲ್ಲಿ ಗ್ರಹಗಳಿದ್ದರೆ ದೇವತಾಚಿಂತೆ, ಸ್ವಕ್ಷೇತ್ರಮಿತ್ರಸ್ಥಿತಿ ವರ್ಗಾದಿಗಳಿದ್ದರೆ ಮನುಷ್ಯಚಿಂತೆ, ನೀಚವರ್ಗಾದಿಗಳಿದ್ದರೆ ಪ್ರೇತ ಚಿಂತೆ ಮಾಡಬೇಕೆಂದು ಮಾಧವಾಚಾರ್ಯರ ಅಭಿಪ್ರಾಯ.

ಭುಕ್ತಿಗ್ರಹೋ ವಾ ಭಾವೋ ವಾ ಕುಜಮಂದಯುತೋ ಯದಿ ।
ಭೋಜನಂ ಲಭ್ಯತೇ ನಾತ್ರ ಶಸ್ತ್ರಭೀತಿಃ ಸದಾ ಭವೇತ್ ॥ 63 ॥

ಭುಕ್ತಿಗ್ರಹವಾಗಲೀ, ಭುಕ್ತಿಭಾವವಾಗಲೀ, ಕುಜಶನಿಸಂಪರ್ಕದಲ್ಲಿದ್ದರೆ ಉಪಚಾರ ಸಿಗುವುದು ಕಷ್ಟ. ಶಸ್ತ್ರಭಯವಿರುತ್ತದೆ

ಆಚಾರ್ಯದೇವಲಕ ದಾಸ ಜನಾದಿಭಾವ
ನಾಥೇನ ವೀಕ್ಷಿತಯುತೋ ಗುಳಿಕೋ ಯದಿ ಸ್ಯಾತ್ ।
ಭಾವಸ್ಥಿತೀಕ್ಷಣವಶಾಚ್ಚ ಭವಂತಿ ತೇಷಾಂ
ಪ್ರೇತಾಃ ಪುರಾತನಭವಾಶ್ಚರಭೇಽನ್ಯಥಾಽನ್ಯೇ ॥ 64 ॥

ಆಚಾರ್ಯ ದೇವಲಕ ದಾಸಜನ ರಕ್ಷಕ, ಕ್ಷೇತ್ರೇಶ ಪರಿಚಾರಕ ವರ್ಗಾದಿ ಭಾವಗಳ ಅಧಿಪತಿಗಳಿಗೆ ಅಥವಾ ಸ್ಥಾನಗಳಿಗೆ ಗುಳಿಕ ಸಂಪರ್ಕವಿದ್ದರೆ (ಭಾವಸ್ಥಿತಿ, ದೃಷ್ಟಿ, ಷಡ್ವರ್ಗಾದಿ) ಆಯಾ ಭಾವಗಳಿಗೆ ಸಂಬಂಧಪಟ್ಟ ಪ್ರೇತಗಳಿವೆ ಚರರಾಶಿಯಾದರೆ ಪ್ರಾಚೀನ ಕಾಲದ ಪ್ರೇತ, ಸ್ಥಿರರಾಶಿಯಾದರೆ ಇತ್ತೀಚಿನದ್ದು, ಉಭಯ ರಾಶಿಯಾದರೆ ಮಧ್ಯಕಾಲದ್ದು ಎಂದು ಹೇಳಬೇಕು.

ಪ್ರೇತಾರ್ಥವಾದತಸ್ಕರ ಯುವತಿಚತುಷ್ಪಾದ್ ಭ್ರಾತೃಚಿಂತಾಯಾಮ್ ।
ಸೌರ ಬೃಹಸ್ಪತಿ ಸೌಮ್ಯಾಂಗಾರಕ ಭೃಗುಸೂರ್ಯಶೀತಕರಾಃ ॥ 65 ॥

ಕೃಷ್ಣೀಯದಲ್ಲಿ ಕಾರಕತ್ವ ಇನ್ನೊಂದು ರೀತಿಯಲ್ಲಿದೆ. ಶನಿ ಪ್ರೇತಕಾರಕ, ಗುರು ದ್ರವ್ಯಕಾರಕ, ಬುಧ ವಾದಕಾರಕ, ಅಂಗಾರಕ ಚೋರಕಾರಕ, ಶುಕ್ರ ಯುವತಿಕಾರಕ, ಸೂರ್ಯ ಚತುಷ್ಪಾದ್ ವಾಹನಾದಿಕಾರಕ, ಚಂದ್ರ ಸಹೋದರಕಾರಕ. ಸಾಮಾನ್ಯ ಕಾರಕತ್ವದೊಂದಿಗೆ ಇದನ್ನು ಪರಿಶೀಲಿಸಬೇಕು

## ॥ ಮಾಂತ್ರಿಕಕ್ರಿಯೆಯಲ್ಲಿ ನಿವೃತ್ತಿರಾಶಿ ನೋಡುವ ವಿಚಾರ ॥

ಲಗ್ನಪಂಚಮರಂಧ್ರೇಷು ಬಾಧೇಶೋ ಯದಿ ತಿಷ್ಠತಿ ।
ಆಕೃಷ್ಟಮಾಗತಂ ಬ್ರೂಯಾನ್ಮಾಂದ್ಯಾದಿಷ್ಟಪ್ಯಯಂ ನಯಃ ॥ 66 ॥

ಲಗ್ನಪಂಚಮಾಷ್ಟಮಗಳಲ್ಲಿ ಬಾಧಕಾಧಿಪತಿಯು ಸ್ಥಿತನಾಗಿದ್ದರೆ ಬಾಧಾಕರ್ಷಣೆ ಸರಿಯಾಗಿದೆ ಎಂದೂ, ಈ ಸ್ಥಾನಗಳಲ್ಲಿ ಮಾಂದಿಯಿದ್ದರೆ ಪ್ರೇತಾಕರ್ಷಣೆ ಆಗಿದೆ ಎಂದೂ ಹೇಳಬೇಕು.

ಇಷ್ಟಸ್ಥಾನಸ್ಥಿತೇ ಮಾಂದೌ ಬಾಧೇಶೇ ವಾ ವಿಲಗ್ನತಃ ।
ಬಾಧಾಶುದ್ಧೌ ಸತಿ ಸ್ಥಿತ್ವಾ ಗೃಹ್ಣಾತಿ ಸುಕೃತಂ ಬಲಿಮ್ ॥ 67 ॥
ಸ್ವೀಕೃತ್ಯ ಪುಣ್ಯಂ ಚ ಬಲಿಂ ಗಚ್ಛತ್ಯೇವ ನ ಸಂಶಯಃ ॥ 68 ॥

ಮಾಂದಿಯು ಅಥವಾ ಬಾಧೇಶನು ಲಗ್ನದಿಂದ ಇಷ್ಟಸ್ಥಾನದಲ್ಲಿದ್ದು, ಬಾಧಾ ಶುದ್ಧಿ ಇದ್ದರೆ ಬಾಧಾದೇವತೆಗಳು ಪ್ರಧಾನದೇವತೆಯ ಶಕ್ತಿಗೊಳಗಾಗಿ ಬಲಿಯನ್ನು ಸ್ವೀಕರಿಸಿ ಸ್ಥಳವನ್ನು ಬಿಡುತ್ತಾರೆಂದೂ, ಪ್ರೇತಾದಿಗಳು ಪುಣ್ಯವನ್ನು ಸ್ವೀಕರಿಸಿ ಗತಿ ಹೊಂದುತ್ತಾರೆಂದೂ ಹೇಳಬೇಕು.

ಷಷ್ಠಾಷ್ಟವ್ಯಯಬಾಧಾಸ್ತು ನೇಷ್ಟಾನೀತಿ ಪ್ರಕೀರ್ತಿತಮ್ ।
ಶುಭಗ್ರಹಾಣಾಂ ಸಹಜಮನಿಷ್ಟಮಿತಿ ಕುತ್ರಚಿತ್ ॥ 69 ॥

ಷಷ್ಠ, ಅಷ್ಟಮ, ವ್ಯಯ ಬಾಧೆಗಳು ಅನಿಷ್ಟಸ್ಥಾನಗಳೆಂದೂ ಇತರ ಭಾವಗಳು ಇಷ್ಟಸ್ಥಾನಗಳೆಂದೂ ತಿಳಿಯಬೇಕು. ಕೆಲವು ಕಡೆ ಶುಭಗ್ರಹಗಳಿಗೆ ತೃತೀಯವೂ ಅನಿಷ್ಟವೆಂದು ಹೇಳುತ್ತಾರೆ.

## ॥ ಕರ್ಮಕರ್ಮಿಗಳ ವಿಚಾರ ॥

ಶತ್ರುಬಾಧಾದಿ ಚಿಹ್ನೇಷು ಪೂರ್ವಮ್ ಸಂಸ್ಥಿತೇಷು ಚ ।
ಕರ್ಮೇಶೇ ಬಲಹೀನೇ ಚ ಅನಿಷ್ಟಸ್ಥಾನಗೇ ತಥಾ ॥ 70 ॥
ನ ಪೂರ್ಣತಾಮಗಾತ್ ಕರ್ಮ ಕರ್ತವ್ಯಾ ತು ಕ್ರಿಯಾ ಪುನಃ ॥ 71 ॥

ಶತ್ರುಬಾಧಾದಿ ಚಿಹ್ನೆಗಳು ಮೊದಲಿನಂತೆಯೇ ಇದ್ದು, ಕರ್ಮಾಧಿಪತಿಯು ದುರ್ಬಲನಾಗಿಯೂ ಅನಿಷ್ಟಸ್ಥಿತನಾಗಿಯೂ ಇದ್ದರೆ, ಕರ್ಮವು ಪೂರ್ಣ ಸಫಲವಾಗಿಲ್ಲವೆಂದು ಇನ್ನೂ ನಡೆಯಬೇಕೆಂದು ಹೇಳಬೇಕು.

ಇಷ್ಟದೇವಾದಯೋ ಬಾಧಾದ್ಯನಿಷ್ಟಸ್ಥಾನಗಾ ಯದಿ ।
ಪುನಃ ಪುನಃ ಪ್ರಾರ್ಥನೀಯಾ ದೇವತಾ ಇತಿ ಕೀರ್ತ್ಯತಾಮ್ ॥ 72 ॥

ಇಷ್ಟದೇವತೆಗೆ ಬಾಧಾದಿ ಅನಿಷ್ಟಸ್ಥಿತಿಗಳಿದ್ದರೆ ಮತ್ತೂ ಮತ್ತೂ ಎಲ್ಲರೂ ಸೇರಿ ಪುನಃ ಪುನಃ ಪ್ರಾರ್ಥನೆ ಮಾಡಬೇಕೆಂದು ಹೇಳಬೇಕು.

**ಅಥವಾ ವಿಧಿರನ್ಯಾಯ್ಯಃ ಆಗಾದ್ವ್ಯತ್ಯಸ್ತತಾಮಿತಿ ।**
**ಸಂಚಿಂತ್ಯ ಕಥಯೇತ್ ಪ್ರಶ್ನೇ ದೈವವಿತ್ ಪ್ರಶ್ನಿಕಾಯ ಹಿ ॥ 73 ॥**

ಅಥವಾ ಮೊದಲ ಪ್ರಶ್ನೆ ಮುಗಿದು ಮಾಡಿದ ಕ್ರಿಯಾಭಾಗಗಳು ಹಾಗೂ ಇತರ ಪ್ರಾರ್ಥನಾಸೇವಾದಿಗಳು ಪೂರ್ವಾಪರ ಸರಿಯಿಲ್ಲದೆ ವ್ಯತ್ಯಾಸಗೊಂಡಿವೆ ಎಂದು ಗ್ರಹಸ್ಥಿತಿಗಳನ್ನೆಲ್ಲಾ ಪರಿಶೀಲಿಸಿ ದೈವಜ್ಞನು ಪ್ರಾಶ್ನಿಕನಿಗೆ ವಿವರಿಸಬೇಕು.

**ವಾಗ್ದೋಷ ಪ್ರಾರ್ಥನಾದೋಷ ದೇವಕೋಪಾದಿ ಶಾಂತಯೇ ।**
**ಕ್ರಿಯಾಂ ಪ್ರಾಥಮಿಕೀಂ ಕುರ್ಯಾತ್ ಸರ್ವೇ ಸಂಹತ್ಯ ಭಕ್ತಿತಃ ॥ 74 ॥**

ವಾಗ್ದೋಷ, ಪ್ರಾರ್ಥನಾದೋಷ, ದೇವಕೋಪಾದಿಗಳಿಗೆ ವಿಧಿಸಿದ ಕ್ರಿಯೆಗಳು ಸರಿಯಾಗಿಲ್ಲದಿದ್ದರೆ ಎಲ್ಲರೂ ಸೇರಿ ಭಕ್ತಿಯಿಂದ ನ್ಯೂನತೆಗಳಿಗೆ ಸಂಬಂಧಪಟ್ಟ ಪ್ರಾಥಮಿಕ ಕ್ರಿಯೆಗಳನ್ನು ಮಾಡಬೇಕು.

## ॥ ಬಂಧನಾದಿ ವಿಚಾರ ॥

**ವ್ಯಯಸುತಧನಧರ್ಮಗ್ಯೈರಸೌಮ್ಯೈಃ ಭವನಸಮಾನನಿಬಂಧನಾ ವಿಕಲ್ಪ್ಯಾ ।**
**ಭುಜಗನಿಗಳ ಪಾಶಭೃದ್ದೃಗಾಣ್ಯೈಃ ಬಲವದಸೌಮ್ಯನಿರೀಕ್ಷಿತೈಶ್ಚ ತದ್ವತ್ ॥ 75 ॥**

ಇಷ್ಟಗ್ರಹದ ವ್ಯಯ ಪಂಚಮ ಧನ ನವಮಗಳಲ್ಲಿ ಪಾಪಗ್ರಹಗಳಿದ್ದರೆ ಆ ಪಾಪಗ್ರಹಗಳ ರಾಶ್ಯಂಶಗಳಿಗನುಸಾರವಾದ ಬಂಧನವನ್ನು (ಆಕರ್ಷಣೆಯಲ್ಲಿ ದೇವತೆಗಳಿಂದ ಬಂಧನ, ಶತ್ರುಬಾಧಾದಿ ಪ್ರಕರಣದಲ್ಲಿ ದೇವತೆಗಳಿಗೆ ಬಂಧನ) ಹೇಳಬೇಕು. ಸರ್ಪದ್ರೇಕ್ಕಾಣ, ಪಾಶದ್ರೇಕ್ಕಾಣ, ನಿಗಳದ್ರೇಕ್ಕಾಣಗಳಲ್ಲಿ ಗ್ರಹಗಳಿದ್ದರೆ ಬಂಧನಯೋಗ ಹೇಳಬೇಕು ಕರ್ಕಾಟಕ ದ್ವಿತೀಯ, ವೃಶ್ಚಿಕ ಪ್ರಥಮ ದ್ವಿತೀಯ, ಮೀನಾಂತ್ಯ, ಮಕರಪ್ರಥಮ ಇವು ಬಂಧನದ್ರೇಕ್ಕಾಣಗಳು.

**ಕರ್ಕಿ ದ್ವಿತೀಯೋಽಳಿಭ ಆದ್ಯ ಯುಗ್ಮಂ**
**ಮೀನಾಂತಿಮೋ ಮೃಗಮುಖಪ್ರಥಮಸ್ತಥೈವ ।**

## ॥ ಪ್ರತಿಷ್ಠಾದಿಗಳ ಸ್ಥಾನಚಿಂತನೆ ॥

**ಚರೇ ಸ್ಥಾನಂ ತ್ವನ್ಯದೇವ ಸ್ಥಿರೇ ಚಿಂತಿತಮೇವ ಚ ।**
**ಉಭಯೋ ಪರಿಹಾರ್ಯಂ ಸ್ಯಾತ್ ಕಿಂಚಿದ್ ವ್ಯತ್ಯಸ್ತಮೇವ ವಾ ॥ 76 ॥**

ಚರರಾಶಿ ಬಂದರೆ ಯೋಚಿಸಿದ ಸ್ಥಳ ಬೇರೆಯಾಗಬೇಕೆಂದೂ ಸ್ಥಿರವಾದರೆ ಅಲ್ಲೇ ಆಗಬಹುದೆಂದೂ ಉಭಯರಾಶಿಯಾದರೆ ದೋಷಪರಿಹರಿಸಬಹುದೆಂದೂ ಅಥವಾ ಸ್ವಲ್ಪ ವ್ಯತ್ಯಾಸ ಮಾಡಬಹುದೆಂದೂ ಹೇಳಬೇಕು.

## ॥ ಬಿಂಬವಿಸರ್ಜನೆ ॥

ಭಗ್ನೇಽಪಿ ದೇವಸಾನ್ನಿಧ್ಯಯುಕ್ತಂ ಬಿಂಬಂ ನ ತು ತ್ಯಜೇತ್ ॥ 77 ॥

ಬಿಂಬದಲ್ಲಿ ದೇವಸಾನ್ನಿಧ್ಯವಿದ್ದರೆ ಸ್ವಲ್ಪ ಭಿನ್ನತೆ ಬಂದರೂ ವಿಸರ್ಜಿಸ ಬೇಕಾದ್ದಿಲ್ಲ.

ಯಸ್ಮಿನ್ನಂಗೇ ಭಿನ್ನೇ ಮೃತೋ ಹಿ ಮರ್ತ್ಯೋ ಭವೇನ್ನೂನಮ್ ।
ತಸ್ಮಿನ್ನಂಗೇ ಭಿನ್ನೇ ಬಿಂಬಸ್ಯ ವಿಸರ್ಜನಂ ಕುರ್ಯಾತ್ ॥ 78 ॥

ಯಸ್ಮಿನ್ನಂಗೇ ಭಿನ್ನೇ ನ ಮೃತೋ ಭವತೀಹ ಭೂಮಿಷ್ಠಃ ।
ತಸ್ಮಿನ್ನಂಗೇ ಭಿನ್ನೇ ಸುವರ್ಣಸೂತ್ರಾದಿಭಿರ್ಬಂಧಃ ॥ 79 ॥

ಯಾವ ಅಂಗವು ಭಿನ್ನವಾಗಿದ್ದರೆ ಮನುಷ್ಯನು ಬದುಕಲಾರನೋ ಅಂತಹ ದೇವತಾಶರೀರ ಭಾಗವು ಭಿನ್ನವಾಗಿದ್ದರೆ ಬಿಂಬವಿಸರ್ಜನೆಯನ್ನು ಮಾಡಬೇಕು. ಯಾವ ಅಂಗವು ಭಿನ್ನವಾದರೆ ಮನುಷ್ಯನನ್ನು ಪ್ರಯತ್ನಪಟ್ಟು ಸರಿಮಾಡಬಹುದೋ ಆ ಅಂಗವು ಭಿನ್ನವಾಗಿದ್ದರೆ ಸುವರ್ಣಸೂತ್ರಾದಿಗಳಿಂದ ಬಂಧನಮಾಡಿ ಸರಿ ಪಡಿಸಬೇಕು.

## ॥ ದೇವತಾಂತರ ಪೂಜಾ ನಿಷೇಧಃ ॥

ಆವಾಹ್ಯ ದೇವತಾಮೇಕಾಮರ್ಚಯೇದನ್ಯದೇವತಾಮ್ ।
ಉಭಯೋಃ ಶಾಪತಸ್ತಸ್ಯ ವಿಪರೀತಂ ಫಲಂ ವಿದುಃ ॥ 80 ॥

ಬಿಂಬದಲ್ಲಿ ಒಂದು ದೇವತೆಯನ್ನು ಆವಾಹಿಸಿ ಇನ್ನೊಂದು ದೇವತೆಯನ್ನು ಅರ್ಚಿಸಿದರೆ ಎರಡೂ ದೇವತೆಗಳ ಅಸಮಾಧಾನದಿಂದ ವಿರುದ್ಧಫಲ ಉಂಟಾಗುತ್ತದೆ.

ತ್ಯಕ್ತಂ ಮಂತ್ರೈಶ್ಚ ದೇವೈಶ್ಚ ತ್ಯಾಜ್ಯಂ ಪಾಷಾಣವದ್ಭವೇತ್ ।
ತಲ್ಲಿಂಗಮಾಶ್ರಯಂತೀಹ ಪಿಶಾಚಾ ಬ್ರಹ್ಮರಾಕ್ಷಸಾಃ ॥ 81 ॥

ದೇವತಾಸಾನ್ನಿಧ್ಯವಿಶೇಷವು ಕ್ಷಯಿಸಿದ, ವಿಧಿಪೂರ್ವಕ ಪೂಜಾದಿಗಳಿಂದ ರಹಿತವಾದ ಲಿಂಗಾದಿಗಳನ್ನು ವಿಸರ್ಜಿಸಬೇಕು ಯಾಕೆಂದರೆ ಅದರಲ್ಲಿ ಪಿಶಾಚ ಬ್ರಹ್ಮರಾಕ್ಷಸಾದಿ ದುರ್ದೇವತಾ ಸಾನ್ನಿಧ್ಯವಿರುತ್ತದೆ.

ವಿಷ್ಣೋಶ್ಚ ಪುರತೋ ನೈವ ಹ್ಯನ್ಯಸ್ಯ ಪ್ರತಿಮಾಂ ಯಜೇತ್ ।
ವರ್ಜಯಿತ್ವಾ ಹನೂಮಂತಂ ಶೇಷಂ ಗರುಡಮೇವ ಚ ॥ 82 ॥

ಶ್ರೀಮಹಾವಿಷ್ಣುವಿನ ಎದುರು ಪೂಜೆಮಾಡುವಲ್ಲಿ ಹನೂಮಾನ್, ಶೇಷ ಗರುಡರನ್ನು ಬಿಟ್ಟು ಬೇರೆ ಪ್ರತಿಮೆ ಇಡಬಾರದು ಇದೇ ರೀತಿ ಎಲ್ಲ ದೇವತೆ ಗಳಿಗೂ ಅವರವರ ಅಂತರಂಗದೇವತಾಪ್ರತಿಮೆ ಮಾತ್ರ ಇಡಬೇಕು.

ಪೃಥಕ್ತ್ವಾದರ್ಚಾವತಾರಾಣಾಂ ಏಕಬೇರವಿಧಾನತಃ ।
ಅನ್ಯಮಂತ್ರನಿಷೇಧಾಚ್ಚ ಅನ್ಯಾರ್ಚಿತನಿಷೇಧತಃ ॥ 83 ॥

ಅರ್ಚಾವತಾರಗಳು ಬೇರೆ ಬೇರೆಯೆಂದು ಶಾಸ್ತ್ರವಿಧಿ ಇರುವುದರಿಂದಲೂ ಒಂದು ಗರ್ಭಗುಡಿಯಲ್ಲಿ ಒಂದೇ ಪ್ರತಿಮಾಸಾನ್ನಿಧ್ಯವೆಂಬ ನಿಯಮವಿರುವುದರಿಂದಲೂ ಇತರ ಮಂತ್ರಗಳಿಂದ ಪೂಜೆಗೆ ನಿಷೇಧವಿರುವುದರಿಂದಲೂ ಅನ್ಯಕುಟುಂಬದಿಂದ ಪೂಜಿತವಾದ ಪ್ರತಿಮಾದಿಗಳಿಗೆ ನಿಷೇಧವಿರುವುದರಿಂದಲೂ (ಪ್ರಶ್ನಸಂಗ್ರಹ ಪೂರ್ವಾರ್ಧ 1–30 ಕ್ಷುದ್ರಾನ್ಯಮಂತ್ರಯಜನಂ ಇತ್ಯಾದಿ) ಗರ್ಭಗುಡಿಯಲ್ಲಿ ಬೇರೆ ಸಾನ್ನಿಧ್ಯವಿರುವುದು ವಿಹಿತವಲ್ಲ.

ಪ್ರತಿಮಾಪೀಠಯಂತ್ರೇಷು ನ ನಿತ್ಯಮಭಿಷೇಚನಮ್ ।
ಸಂಕ್ರಾಂತೌ ಪರ್ವಕಾಲೇ ವಾ ಕಾರ್ಯಂ ಸ್ಯಾದಭಿಷೇಚನಮ್ ॥ 84 ॥

ಪ್ರತಿಮೆ, ಪೀಠ, ಯಂತ್ರಗಳಿಗೆ ನಿತ್ಯವೂ ಅಭಿಷೇಕಕ್ಕೆ ವಿಧಿ ಇಲ್ಲ. ಸಂಕ್ರಾಂತಿ ಪರ್ವಕಾಲಗಳಲ್ಲಿ ಅದಕ್ಕೆ ಅಭಿಷೇಕ ಬೇಕು.

ಸ್ಥಿರಪ್ರತಿಷ್ಠಾ ವಿಷಯೇ ಕಾರ್ಯಂ ನಿತ್ಯಾಭಿಷೇಚನಮ್ ।
ಮೃಣ್ಮಯಾದೌ ಪೃಥಗ್ ಬಿಂಬಂ ಸ್ನಾನಾರ್ಥಂ ಕಲ್ಪ್ಯಮೇವ ಹಿ ॥ 85 ॥

'ಚಲಾಚಲೇತಿ ದ್ವಿವಿಧೇ ಪ್ರತಿಷ್ಠೇ' ಎಂಬ ಶಾಸ್ತ್ರೋಕ್ತಿಯಂತೆ ಪ್ರತಿಷ್ಠೆಗಳು 2 ವಿಧ. ಸ್ಥಿರಪ್ರತಿಷ್ಠೆಯಾದರೆ ನಿತ್ಯವೂ ಅಭಿಷೇಕವಿಧಿ ಇದೆ. ಮೃತ್ತಿಕಾಬಿಂಬವಾದರೆ ಅಭಿಷೇಕಾರ್ಥವಾಗಿ ಬೇರೆ ಬಿಂಬವನ್ನಿಡಬೇಕು.

ಮೂಲಬಿಂಬಂ ಸ್ನಾನಬಿಂಬ ಮಲಂಕಾರಾರ್ಥಮೇವ ಚ ।
ಉತ್ಸವಾರ್ಥಂ ಚ ಯಾತ್ರಾರ್ಥಂ ಪಂಚಬಿಂಬವಿಧಿಃ ಸ್ಮೃತಃ ॥ 86 ॥

ಮೂಲಬಿಂಬ, ಸ್ನಾನಬಿಂಬ, ಅಲಂಕಾರಬಿಂಬ, ಉತ್ಸವಬಿಂಬ, ಯಾತ್ರಾಬಿಂಬ ಎಂದು ಬಿಂಬಗಳು 5 ವಿಧ.

ಏಕಯೋನಿಧ್ಯಾನಮೂಲಾದ್ಯಾಯುಧಾದಿ ಸಮಂ ಭವೇತ್ ॥ 87 ॥

ಈ ಎಲ್ಲ ಬಿಂಬಗಳ ಯೋನಿ, ಧ್ಯಾನ, ಮೂಲ, ಗುರೂಪದೇಶದ ರೀತಿ ಆಯುಧಾದಿ ಅಲಂಕಾರಗಳು ಒಂದೇ ರೀತಿ ಇರಬೇಕು.

## ॥ ಪ್ರಶ್ನನಿರ್ವಚನಮ್ ॥

ಅವಿಜ್ಞಾತಪ್ರವಚನಂ ಪ್ರಶ್ನ ಇತ್ಯಭಿಧೀಯತೇ ।
ಅನೇಕ ಶಾಸ್ತ್ರಸಂಬದ್ಧಃ ಊಹಾಪೋಹೈರ್ದೃಢೀಕೃತಃ ॥ 88 ॥

ಪೃಚ್ಛಕನಿಗೆ ಅಜ್ಞಾತವಾದ ವಿಷಯವಿವರಣೆ ಮಾಡುವುದಕ್ಕೆ ಪ್ರಶ್ನೆ ಎಂದು ಹೆಸರು. ಈ ಪ್ರಶ್ನಕ್ರಿಯೆಯು ಅನೇಕ ಶಾಸ್ತ್ರಗಳಿಗೆ (ದೇವಸ್ಥಾನಕ್ಕೆ ಸಂಬಂಧಪಟ್ಟಂತೆ

ತಂತ್ರಶಾಸ್ತ್ರ ಮಂತ್ರಶಾಸ್ತ್ರ ಶಿಲ್ಪಶಾಸ್ತ್ರಾದಿ) ಸಂಬಂಧಿಸಿದಂತೆ ಅವಿರೋಧವಾಗಿಯೂ, ಊಹಾಪೋಹ, ಸಂವಾದಾದಿಗಳಿಂದ ದೃಢೀಕರಿಸಲ್ಪಡುವಂತೆಯೂ ಇರಬೇಕು.

**ಅನೇಕ ವಿಷಯೋಪೇತಃ ಪ್ರಶ್ನೋ ರಂಗಯುತೋ ಭವೇತ್ ॥ 89 ॥**

ವಿಮರ್ಶಿಸಬೇಕಾದ ವಿಷಯಗಳು ಹೆಚ್ಚಿದ್ದರೆ ಭಕ್ತರ ಸಮೂಹ, ಶಾಸ್ತ್ರಜ್ಞರ ಸಮೂಹವಿದ್ದು, ಪ್ರಾರ್ಥನೆ-ಪೂಜಾದಿಗಳೊಂದಿಗೆ ಸಾವಧಾನವಾಗಿ ಆರೂಢಪ್ರಶ್ನೆ, ಸ್ವರ್ಣಪ್ರಶ್ನೆ ಅಥವಾ ಅಷ್ಟಮಂಗಲಪ್ರಶ್ನೆಯ ರೀತಿಯಲ್ಲಿ ಪ್ರಶ್ನೆಯನ್ನು ವಿಸ್ತರಿಸಿ ಪರಿಶೀಲಿಸಬೇಕು.

## ॥ ಉಪಸಂಹಾರ ॥

**ಉಕ್ತೇಷ್ವನುಕ್ತೇಷ್ವಪಿ ಚೋಪಘಾತೇ-**
**ಷ್ವಾಲೋಚ್ಯ ತಜ್ಞೈಃ ಸಹ ಸಾಧಕೇಂದ್ರಃ ।**
**ಶ್ರುತಿಸ್ಮೃತಿನ್ಯಾಯಪರೈಃ ಸದುಕ್ತಿಭಿಃ**
**ತನ್ನಿಷ್ಕೃಯಾಂ ಪುಷ್ಕಲತಾ ಯಥೈವ ॥ 90 ॥**

ಪೂಜಾದಿಲೋಪಗಳು ಯಾವುದಿದ್ದರೂ ಅದಕ್ಕೆ ಪರಿಹಾರಾದಿಗಳನ್ನು ಶಾಸ್ತ್ರ ಗ್ರಂಥದಲ್ಲಿ ಹೇಳಿದ್ದರೂ ಹೇಳದಿದ್ದರೂ ಜ್ಯೋತಿಷಿಯು ಶ್ರುತಿಸ್ಮೃತಿನ್ಯಾಯಸಾಧಕ ಗಳಾದ ಯುಕ್ತಿಗಳಿಂದ ತಿಳಿದವರೊಂದಿಗೆ ಚೆನ್ನಾಗಿ ಸಮಾಲೋಚಿಸಿ, ಅದಕ್ಕೆ ಪರ್ಯಾಪ್ತವಾಗಿ ಪರಿಹಾರವನ್ನು ನಿರೂಪಿಸತಕ್ಕದ್ದು.

**ಭರದ್ವಾಜಕುಲೋದ್ಭೂತ ಗೋಪಾಲಾಚಾರ್ಯಶರ್ಮಣಾ ।**
**ಮುಹೂರ್ತಪ್ರಶ್ನವಿಷಯೇ ಗ್ರಂಥ ಏವಂ ನಿರೂಪಿತಃ ॥**

ಭರದ್ವಾಜಗೋತ್ರದ ಗೋಪಾಲಾಚಾರ್ಯರಿಂದ ಮುಹೂರ್ತ ಮತ್ತು ಪ್ರಶ್ನೆ ಗಳಿಗೆ ಸಂಬಂಧಿಸಿ 'ಮುಹೂರ್ತಸನ್ಮಾರ್ಗದರ್ಶಿನಿ' ಎಂಬ ಈ ಗ್ರಂಥವು ನಿರೂಪಿತ ವಾಯಿತು.

॥ ಇತಿ ಪ್ರಶ್ನಸಂಗ್ರಹೇ ಪರಿಶಿಷ್ಟಾಧ್ಯಾಯಃ ॥

* * * * *

## ಗ್ರಂಥಋಣ


1. ಉತ್ತರ ಕಾಲಾಮೃತ.
2 ಗೃಹ್ಯಸೂತ್ರಗಳು.
3. ತೈತ್ತಿರೀಯ ಬ್ರಾಹ್ಮಣಾದಿ.
4. ಧರ್ಮಸಿಂಧು.
5. ನಿರ್ಣಯಸಿಂಧು.
6. ಪುರುಷಾರ್ಥಚಿಂತಾಮಣಿ.
7. ಪ್ರಯೋಗಪಾರಿಜಾತಕ.
8. ಬೃಹತ್‌ಸಂಹಿತಾ.
9 ಭಗವಂತ ಭಾಸ್ಕರ.
10. ಮನುಸ್ಮೃತಿ.
11 ಮನುಸ್ಮೃತಿ ವ್ಯಾಖ್ಯಾನ.
12. ಮುಹೂರ್ತ ಆದರ್ಶ.
13 ಮುಹೂರ್ತಚಿಂತಾಮಣಿ.
14 ಮುಹೂರ್ತದೀಪಿಕಾ.
15. ಮುಹೂರ್ತಪದವಿ
16 ಮುಹೂರ್ತಪದವೀವ್ಯಾಖ್ಯಾ.
17. ಮುಹೂರ್ತಮಾಧವೀಯ.
18 ಶ್ರೀಮುಹೂರ್ತಸಂಹಿತಾ.
19 ಸಂಸ್ಕಾರಕೌಸ್ತುಭ.
20. ಸರ್ವಸಿಂಧು
21 ಸ್ಮೃತ್ಯರ್ಥಸಾರ.
22 ಹೇಮಾದ್ರಿ.


* * * * *



## ಶ್ರೀ ಹರಿ ಮತ್ತು ಕಾಲ

ಗ್ರಹರ್ಕ್ಷತಾರಾಚಕ್ರಸ್ಥಃ ಪರಮಾಣ್ವಾದಿನಾ ಜಗತ್ ।
ಸಂವತ್ಸರಾವಸಾನೇನ ಪರ್ಯೇತ್ಯನಿಮಿಷೋ ವಿಭುಃ ॥

– ಭಾಗ. 3.12.13

ಚಂದ್ರಸೂರ್ಯಾದಿಗ್ರಹಗಳು, ಅಶ್ವಿನ್ಯಾದಿ ನಕ್ಷತ್ರಗಳು, ತಾರೆಗಳು ಇವೆಲ್ಲವುಗಳ ಮಂಡಲಗಳಲ್ಲಿದ್ದುಕೊಂಡು, ಯಾವಾಗಲೂ ನೋಡುತ್ತ ಅನಿಮಿಷ ಎನಿಸಿರುವ ಕಾಲಾಂತರ್ಯಾಮಿ ಶ್ರೀಹರಿ, ಕಾಲಘಟಕವಾದ ಪರಮಾಣು ಮುಂತಾದವುಗಳಿಂದ ಸಂವತ್ಸರದ ವರೆಗಿನ ಕಾಲದಿಂದ ಜಗತ್ತನ್ನು ಸುತ್ತುವರಿಯುತ್ತಿರುವನು.